ಸಾಲವನ್ನು ಮರುಪಾವತಿಸಲು ವಿಫಲರಾಗಿ ಸುಸ್ತಿದಾರರಾದ ಕಾರಣ ಸಾಲ ವಸೂಲಾತಿಗಾಗಿ ಕರ್ನಾಟಕ ಸೌಹಾರ್ದ ಸಹಕಾರಿ 1997ರ ಅಡಿಯಲ್ಲಿ ಗೌರವ ಮಧ್ಯಸ್ಥಗಾರರು, ಸಹಕಾರ ಸಂಘಗಳು ಇವರ ನ್ಯಾಯಾಲಯದಿಂದ ಪಡೆದ ದಾವಾ ಸಂಖ್ಯೆ ಕ್ರ. ಆರ್.ಸಿಎಸ್./ಡಿಐಎಸ್/ಡಿ–4/ಎಸ್ಓಯು/1082/03–04 ಆದೇಶದನ್ವಯ ದಿ·ಶಿರಸಿ ಅರ್ಬನ್ ಸಹಕಾರಿ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಸೌಹಾರ್ದ ಸಹಕಾರಿ ನಿಯಮಗಳ ಅಡಿ ಸಹಕಾರಿಗಳ ಸಹಾಯಕ ರಿಜಿಸ್ಟ್ರಾರ್ (ನಿ. 441) ಹಾಗೂ ವಸೂಲಾಧಿಕಾರಿಗಳು, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ರವರಲ್ಲಿ ಸಿಇಪಿ:ಎಆರ್ಇ/ಯುಬಿಎಫ್/39/2005–06, ಮೂಲತಃ ದಾಖಲ್ ಮಾಡಿದ್ದು ಮುಂದಿನ ವಸೂಲಿ ಕ್ರಮದ ಬಗ್ಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ, ಇವರ ಕಛೇರಿಗೆ ವರ್ಗಾವಣೆಗೊಂಡು ಅಮಲ್ಜಾರಿ ಪ್ರಕರಣ ನಂಬರ್ (ವ) 207/06–07 ದಾಖಲಾದಂತೆ ಮುಂದಿನ ವಸೂಲಿ ಕ್ರಮದ ಬಗ್ಗೆ ಅಮಲ್ಜಾರಿ ಪ್ರಕರಣವನ್ನು ಬ್ಯಾಂಕಿನ ಮಾರಾಟಾಧಿಕಾರಿಯವರಿಗೆ ವಹಿಸಲಾಗಿತ್ತು. ಸದರಿ ಮಾರಾಟಾಧಿಕಾರಿಯವರು ಅಂತಿಮವಾಗಿ ಅಮಲ್ಜಾರಿ ಕ್ರಮ ಕೈಗೊಂಡು ಮೂಲ ಸಾಲಗಾರನ ಚರ ಸ್ಥಿರ ಆಸ್ತಿಗಳು ಇಲ್ಲದೇ ಇರುವುದರಿಂದ ಜಾಮೀನುದರನಾದ ಶ್ರೀ ಗೋಪಾಲ ವಿ. ಹೆಗಡೆ, ಸಾಕೀನ: ಜನಗೇರಿ, ತಾಲ್ಲೂಕ: ಮುಂಡಗೋಡ ಈತನು ಹೊಂದಿದ್ದ ಈ ಕೆಳಗೆ ಕಾಣಿಸಿದ ಸ್ಥಿರಾಸ್ತಿಯನ್ನು ಜಪ್ತಿಪಡಿಸಿ ದಿನಾಂಕ : 25–08–2010 ರಂದು ಬಹಿರಂಗ ಹರಾಜಿಗೆ ತೆಗೆದು, ಸದರಿ ದಿನ ಖರೀದಿದಾರರು ಯಾರೂ ಭಾಗವಹಿಸದೇ ಇರುವ ಕಾರಣ ಸದರ್ ಬಹಿರಂಗ, ಹರಾಜನ್ನು ದಿನಾಂಕ 01–09–2010ಕ್ಕೆ ಮುಂದೂಡಿ, ಸದರ್ ಮುಂದುವರಿದ ಬಹಿರಂಗ ಹರಾಜಿನಲ್ಲಿ ಏಳು ಜನ ಬಿಡ್‌ದಾರರು ಭಾಗವಹಿಸಿದ್ದು, ಈ ಪೈಕಿ ಶ್ರೀ ರಾಮಣ್ಣ ಹನುಮಂತಪ್ಪ ಜೇಕಿನಕಟ್ಟಿ ಸಾಕೀನ ವ ಅಂಚೆ : ಪಾಳಾ, ತಾಲೂಕ : ಮುಂಡಗೋಡ ಈತನು ರೂ. 1,04,000/– (ರೂ. ಒಂದು ಲಕ್ಷ ನಾಲ್ಕು ಸಾವಿರ ಮಾತ್ರ) ಗಳಿಗೆ ಬಿಡ್ಡು ಮಾಡಿದ್ದು ಅತ್ಯಧಿಕ ಬಿಡ್‌ದಾರನಾಗಿರುತ್ತಾನೆ.

ಡಿಕ್ರಿ ಆದೇಶ ಮತ್ತು ಅಮಲ್ಜಾರಿ ಅರ್ಜಿ ಅನ್ವಯ ಬಾಕಿದಾರನಿಂದ ಸದರ್ ಸ್ಥಿರಾಸ್ತಿ ಜಪ್ತಿ ಮಾಡಿದ ಸಾಲದ ಖಾತೆಗೆ ಹರಾಜು ದಿನಾಂಕದವರೆಗೆ ಅಸಲು, ಬಡ್ಡಿ ಹಾಗೂ ಇತರೇ ಖರ್ಚು ಸೇರಿ ಒಟ್ಟು ರಖಂ ರೂ. 1,36,489–00 ಬ್ಯಾಂಕಿಗೆ ಬಾಕಿ ಬರಬೇಕಾಗಿರುತ್ತದೆ. ರೂ. 1,04,000–00ಗಳ ಅತ್ಯಧಿಕ ಬಿಡ್ಡುದಾರನಾದ ಶ್ರೀ ರಾಮಣ್ಣ ಹನುಮಂತಪ್ಪ ಜೇಕಿನಕಟ್ಟಿ, ಸಾಕೀನ : ವ ಅಂಚೆ : ಪಾಳಾ, ತಾಲೂಕ : ಮುಂಡಗೋಡ ಈತನು ಬಿಡ್ಡಿನ ಮೊತ್ತದ ಶೇಕಡಾ 15ರ ಬಾಬ್ತು ರೂ. 16,000–00 (ರೂ. ಹದಿನಾರು ಸಾವಿರ ಮಾತ್ರ) ಗಳನ್ನು ಹರಾಜಿನ ಸ್ಥಳದಲ್ಲಿಯೇ ಡಿಕ್ರಿದಾರ ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕಿನ ಮುಂಡಗೋಡ ಶಾಖೆಯಲ್ಲಿ ವಸೂಲಾಧಿಕಾರಿಗಳ ಅಮಾನತ್ ಖಾತೆಗೆ ಪಾವತಿ ಮಾಡಿರುತ್ತಾನೆ. ಬಾಕಿ ಉಳಿದ ಬಿಡ್ ಮೊತ್ತ ರೂ. 88,000–00 (ರೂ. ಎಂಬತ್ತೆಂಟು ಸಾವಿರ ಮಾತ್ರ) ಗಳನ್ನು ಮತ್ತು ಮುದ್ರಾಂಕ ಶುಲ್ಕ ರೂ. 6,240–00 ಹಾಗೂ ನೋಂದಣಿ ಫೀ ರೂ. 1,040–00 ಒಟ್ಟೂ ರೂ. 95,280–00 ಗಳನ್ನು ದಿನಾಂಕ 09–10–2010 ರಂದು ಬ್ಯಾಂಕಿನಲ್ಲಿ ವಸೂಲಾಧಿಕಾರಿಗಳ ಅಮಾನತ್ ಖಾತೆಗೆ ಜಮಾ ಮಾಡಿರುತ್ತಾನೆ.

ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕಿನ ಮಾರಾಟಾಧಿಕಾರಿಯವರು ದಿನಾಂಕ 01–09–2010 ರಂದು ನಡೆಸಿದ ಸಾರ್ವಜನಿಕ ಮುಂದುವರಿದ ಬಹಿರಂಗ ಹರಾಜನ್ನು ಕರ್ನಾಟಕ ಸಹಕಾರ ಸಂಘಗಳ ಕಾನೂನು ಮತ್ತು ನಿಯಮಗಳನ್ನು ಪಾಲಿಸಿ ಹರಾಜು ಕ್ರಮವನ್ನು ನಡೆಸಿರುವುದಾಗಿ ಹಾಗೂ ಬ್ಯಾಂಕಿನ ಬಾಕಿದಾರನಾದ ಶ್ರೀ ಗೋಪಾಲ ವಿ. ಹೆಗಡೆ ಸಾಕೀನ : ಜನಗೇರಿ, ತಾಲೂಕ : ಮುಂಡಗೋಡ ಈತನ ಸ್ಥಿರಾಸ್ತಿಯನ್ನು ಶ್ರೀ ರಾಮಣ್ಣ ಹನುಮಂತಪ್ಪ ಜೇಕಿನಕಟ್ಟಿ ರವರಿಗೆ ಮಾರಾಟ ಮಾಡಿರುವ ಆಸ್ತಿಯ ಹರಾಜನ್ನು ಖಾಯಂಗೊಳಿಸಬೇಕೆಂದು ಉಲ್ಲೇಖ (3) ರಂತೆ ಈ ಕಛೇರಿಗೆ ಸವಿಸ್ತಾರವಾದ ವರದಿಯನ್ನು ಸಲ್ಲಿಸಿರುತ್ತಾರೆ.

ದಿನಾಂಕ 01–09–2010ರಂದು ನಡೆಸಿದ ಮುಂದುವರಿದ ಸ್ಥಿರಾಸ್ತಿ ಬಹಿರಂಗ ಹರಾಜಿನ ನಡವಳಿಕೆಯನ್ನು ಪರಿಶೀಲಿಸಿದಾಗ ಸದರಿ ಸ್ಥಿರಾಸ್ತಿ ಬಹಿರಂಗ ಹರಾಜಿನಲ್ಲಿ ಒಟ್ಟು 7 ಜನ ಬಿಡ್‌ದಾರರು ಭಾಗವಹಿಸಿದ್ದು, ಈ ಪೈಕಿ ಅತ್ಯಧಿಕ ಬಿಡ್ಡುದಾರನಾದ ಶ್ರೀ ರಾಮಣ್ಣ ಹನುಮಂತಪ್ಪ ಜೇಕಿನಕಟ್ಟಿ ಇವರಿಗೆ ರೂ. 1.04,000–00 (ರೂ. ಒಂದು ಲಕ್ಷ ನಾಲ್ಕು ಸಾವಿರ)ಗಳಿಗೆ ಮಾರಾಟ ಮಾಡಿರುವುದು ದಾಖಲೆಗಳಿಂದ ತಿಳಿದು ಬಂದಿರುತ್ತದೆ. ಲಿಲಾವು ಆದ ದಿನಾಂಕದಿಂದ 30 ದಿನಗಳ ಅವಧಿಯ ಒಳಗಾಗಿ ದಿನಾಂಕ 22–09–2010ರಂದು ತೀರ್ಪು ಬಾಕಿದಾರನಾದ ಶ್ರೀ ಗೋಪಾಲ ವಿ. ಹೆಗಡೆ, ಸಾಕೀನ : ಜನಗೇರಿ, ತಾಲೂಕ : ಮುಂಡಗೋಡ ಇವರು ಮಾನ್ಯ ನ್ಯಾಯಾಲಯದಲ್ಲಿ ತನ್ನ ಸ್ಥಿರಾಸ್ತಿಯನ್ನು ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿದ್ದರ ಕುರಿತು ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ನಿಯಮ 38 (5)(ಎ)ರ ಅಡಿಯಲ್ಲಿ ಅರ್ಜಿ ಸಲ್ಲಿಸಿ, ಸ್ಥಿರಾಸ್ತಿ ಬಹಿರಂಗ ಹರಾಜನ್ನು ರದ್ದುಪಡಿಸಲು ಕೋರಿದ್ದು, ಮಾನ್ಯ ನ್ಯಾಯಾಲಯವು ಅರ್ಜಿದಾರನು ಸಲ್ಲಿಸಿದ ಅರ್ಜಿ, ವಿವಿಧ ದಾಖಲಾತಿಗಳು ಹಾಗೂ ಎದುರುದಾರರು ಸಲ್ಲಿಸಿದ ಲಿಖಿತ ಹೇಳಿಕೆ, ದಾಖಲಾತಿಗಳು, ಲಿಖಿತ ವಾದಗಳನ್ನು ಹಾಗೂ ಪ್ರಸ್ತುತ ಅಮಲ್ಜಾರಿ ಪ್ರಕರಣದಲ್ಲಿ ವಿವರವಾಗಿ ಕೈಗೊಂಡ ಕ್ರಮ ಹಾಗೂ ದಾಖಲಾತಿಗಳನ್ನು ಕೂಲಂಕುಷವಾಗಿ ಪರಿಶೀಲಿಸಿ ದಿನಾಂಕ 02–04–2011 ರಂದು ಅರ್ಜಿದಾರ ಶ್ರೀ ಗೋಪಾಲ ವಿ. ಹೆಗಡೆ ಇವರು ದಿನಾಂಕ 22–09–2010 ರಂದು ಕರ್ನಾಟಕ ಸಹಕಾರ ಸಂಘಗಳ ನಿಯಮ 38(5)(ಎ) ಅಡಿಯಲ್ಲಿ ಸಲ್ಲಿಸಿದ ಅರ್ಜಿಯನ್ನು ತಿರಸ್ಕರಿಸಿ ಆದೇಶ ಹೊರಡಿಸಿದ್ದು ಇರುತ್ತದೆ. ಕಾರಣ ದಿನಾಂಕ 01–09–2010ರಂದು ನಡೆಸಲಾದ ಮುಂದುವರಿದ ಸ್ಥಿರಾಸ್ತಿ ಬಹಿರಂಗ ಹರಾಜನ್ನು ಖಾಯಂಗೊಳಿಸಬಹುದೆಂದು ಮಾರಾಟಾಧಿಕಾರಿಯವರು ಸಲ್ಲಿಸಿದ ವರದಿಯನ್ನು ಪರಿಶೀಲಿಸಿ ಮಾರಾಟಾಧಿಕಾರಿಯವರು ಕೈಗೊಂಡ ಕ್ರಮಗಳು ಕಾನೂನುಬದ್ಧವಾಗಿದೆ ಎಂದು ಕಂಡುಬಂದಿರುವುದರಿಂದ ಈ ಕೆಳಗಿನ ಸ್ಥಿರೀಕರಣದ ಆದೇಶ ಹೊರಡಿಸಲಾಗಿದೆ.

**ಆದೇಶ ಎ.ಆರ್.21/ಬ/ಸಿಇಪಿ ನಂ. (ವ) 207/06–07/2011–12, ದಿನಾಂಕ : 23–04–2011.**

ಶ್ರೀ ಎಸ್. ಬಿ. ಆಗೇರ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38(6)(ಎ) ರನ್ವಯ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಅರ್ಜಿ ಸಂಖ್ಯೆ: ಎಆರ್ಇ/ಯುಬಿಎಫ್/39/2005–06, ಸಿಇಪಿ : ಎಆರ್ಇ/ಯುಬಿಎಫ್/ಆರ್ಒ/654/06–07(ವ),(ವ) 207/06–07ನ್ನು ಶ್ರೀ ಗೋಪಾಲ ವಿ.

ಹೆಗಡೆ ಇವರಿಗೆ ಸೇರಿದ ಸ್ಥಿರಾಸ್ತಿಯನ್ನು ದಿನಾಂಕ: 01–09–2010 ರಂದು ವಾದಿ ಬ್ಯಾಂಕಿನ ಮಾರಾಟಾಧಿಕಾರಿಯವರು ನಡೆಸಿದ ಮುಂದುವರಿದ ಬಹಿರಂಗ ಹರಾಜಿನಲ್ಲಿ ಶ್ರೀ ರಾಮಣ್ಣ ಹನುಮಂತಪ್ಪ ಜೇಕಿನಕಟ್ಟೆ, ಸಾಕ ವ ಅಂಚೆ : ಪಾಳಾ, ತಾಲೂಕ : ಮುಂಡಗೋಡ ಈತನು ಅತಿ ಹೆಚ್ಚಿನ ಬಿಡ್‌ದಾರನಾಗಿದ್ದು, ಈತನಿಗೆ ರೂ. 1,04,000–00 (ರೂ. ಒಂದು ಲಕ್ಷ ನಾಲ್ಕು ಸಾವಿರ ಮಾತ್ರ) ಗಳನ್ನು ಈ ಕೆಳಗೆ ವಿವರಿಸಿದ ಸ್ಥಿರಾಸ್ತಿಯನ್ನು ಬಹಿರಂಗವಾಗಿ ಹರಾಜುಮಾರಾಟ ಮಾಡಿರುವುದನ್ನು **ಖಾಯಂಗೊಳಿಸಿ ಸ್ಥಿರೀಕರಿಸಿರುವುದಾಗಿ ಈ ಮೂಲಕ ಆದೇಶ ಮಾಡಿದೆ.** ಅಲ್ಲದೇ ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ ಲಿ., ಮೂಲಕ ಇದರ ಮುಂಡಗೋಡ ಶಾಖೆಯಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ ಇವರ ಅಮಾನತ್ ಖಾತೆಯಲ್ಲಿ ಜಮಾ ಇರುವ ಒಟ್ಟು ರಖಂ ರೂ. 1,11,280–00ಗಳಲ್ಲಿ ಸದರ್ ಸ್ಥಿರಾಸ್ತಿ ಜಪ್ತಿ ಮಾಡಿದ ಬಾಕಿದಾರನ ಸಾಲದ ಖಾತೆಗೆ ರೂ. 1,04,000–00 ಗಳನ್ನು ಜಮಾ ಪಡೆದುಕೊಳ್ಳಲು ಮತ್ತು ಉಳಿದ ರೂ. 7,280–00 ಗಳಲ್ಲಿ ಮುದ್ರಾಂಕ ಶುಲ್ಕಕ್ಕೆ ರೂ. 6,240–00 ಹಾಗೂ ನೋಂದಣಿ ಫೀ ರೂ. 1,040–00 ಭರಣ ಮಾಡಲು ಸಹ ಸದರ್ ಬ್ಯಾಂಕಿನ ಮುಂಡಗೋಡ ಶಾಖೆಯ ಶಾಖಾ ವ್ಯವಸ್ಥಾಪಕರಿಗೆ ಈ ಮೂಲಕ ಆದೇಶ ನೀಡಲಾಗಿದೆ.

**ಸ್ಥಿರಾಸ್ತಿಯ ವಿವರ**

ಉತ್ತರ ಕನ್ನಡ ಜಿಲ್ಲಾ, ಮುಂಡಗೋಡ ತಾಲೂಕ, ಜನಗೇರಿ ಗ್ರಾಮದಲ್ಲಿರುವ ಸ್ಥಿರಾಸ್ತಿ ರೆವೆನ್ಯೂ ಸರ್ವೇ ನಂಬರ್ 2/2, ಕ್ಷೇತ್ರ : 1–00–00, ಇದರ ಚಕ್‌ಬಂದಿ ಸರ್ವೆ ಗಡಿಯಂತೆ.

ಮಾರಾಟದ ಮೊಬಲಗು : ರೂ. 1,04,000–00

ಮಾರಾಟ ಮಾಡಿದ ದಿನಾಂಕ : 01–09–2010

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ 23–04–2011 ರಂದು ನೀಡಲಾಗಿದೆ.

ಸಹಾಯಕ ನಿಬಂಧಕರು, ಸಹಕಾರ ಸಂಘಗಳು ಮತ್ತು
ವಸೂಲಾಧಿಕಾರಿಗಳು, ಶಿರ್ಸಿ ಉಪವಿಭಾಗ, ಶಿರ್ಸಿ.

**ನಮೂನೆ ಕ್ರಮಾಂಕ – 10**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರನ್ವಯ ರಚಿತವಾದ ನಿಯಮ 38, ಉಪನಿಯಮ 7ರ ಪ್ರಕಾರ ಕೊಟ್ಟ

**ವಿಕ್ರಿ ಪ್ರಮಾಣ ಪತ್ರ**

**ನೋಂದಣಿ ಶುಲ್ಕದ ವಿವರ :**

ಚಲನ ರಶೀದಿ ನಂಬರ :
ದಿನಾಂಕ :
ರಖಂ :
ಶಾಖೆ :

**ದಾವಾ ಸಂಖ್ಯೆ** : ಕ್ಯ.ಆರ್‌ಸಿಎಸ್/ಡಿಐಎಸ್/ಡಿ–4/ಎಸ್‌ಓಯು/1082/03–04

**ಅಮಲ್ಜಾರಿ ಸಂಖ್ಯೆ** : ಎಆರ್‌ಇ: ಯುಬಿಎಫ್ : 39:2005–06 ಎಆರ್‌ಇ:ಯುಬಿಎಫ್:ಆರ್‌ಓ:654:2006–07 (ವ) (ವ) 207:2006–07

**ಹೆಸರು** : ಶ್ರೀ ಎಸ್. ಬಿ. ಆಗೇರ,
ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ (ಉ.ಕ.)

| **ಡಿಕ್ರಿದಾರ** | | **ತೀರ್ಪುಬಾಕಿದಾರ** |
|---|---|---|
| ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಶಿರಸಿ | **–ವಿರುದ್ಧ–** | ಶ್ರೀ ಗೋಪಾಲ ವಿ. ಹೆಗಡೆ,<br>ಸಾಕೀನ : ಜನಗೇರಿ, ತಾಲೂಕ : ಮುಂಡಗೋಡ |

ಈ ಮೂಲಕ ಪ್ರಮಾಣೀಕರಿಸುವುದೇನೆಂದರೆ,

ಉತ್ತರ ಕನ್ನಡ ಜಿಲ್ಲಾ ಮುಂಡಗೋಡ ತಾಲೂಕು, ಪಾಳಾ ಗ್ರಾಮದ ರಹವಾಸಿ ಶ್ರೀ ರಾಮಣ್ಣ ಹನುಮಂತಪ್ಪ ಜೇಕಿನಕಟ್ಟಿ, ಇವರು ಉತ್ತರ ಕನ್ನಡ ಜಿಲ್ಲಾ, ಮುಂಡಗೋಡ ತಾಲೂಕು, ಜನಗೇರಿ ಗ್ರಾಮದ ನಿವಾಸಿ ಶ್ರೀ ಗೋಪಾಲ ವಿ. ಹೆಗಡೆ, ಇವರಿಂದ ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ ಲಿ., ಶಿರಸಿ ಇದರ ಶಿರಸಿ ಪ್ರಧಾನ ಶಾಖೆಗೆ ಸಂದಾಯವಾಗತಕ್ಕ ಬಾಕಿ ವಸೂಲಿ ಬಗ್ಗೆ ಈ ಕಾರ್ಯಾಲಯದಲ್ಲಿ ದಾಖಲುಪಡಿಸಿದ ಅಮಲ್ಜಾರಿ ಪ್ರಕರಣ ಸಂಖ್ಯೆ ಎಆರ್‌ಇ : ಯುಬಿಎಫ್:39:2005–06, ಎಆರ್‌ಇ:ಯುಬಿಎಫ್:ಆರ್‌ಓ:654:2006–07(ವ), (ವ) 207:2006–07 ನೇದರ ಅಮಲ ಬಜಾವಣೆಯಲ್ಲಿ ಈ ಕೆಳಗೆ ಅನುಬಂಧದಲ್ಲಿ ಕಾಣಿಸಿದ ತೀರ್ಪು ಬಾಕಿದಾರನ ಜಪ್ತಿಪಡಿಸಿದ ಸ್ಥಿರಾಸ್ತಿಯನ್ನು ಅಧಿಕಾರ ಹೊಂದಿದ ಮಾರಾಟಾಧಿಕಾರಿ, ದಿ ಶಿರಸಿ ಅರ್ಬನ್ ಸಹಕಾರಿ ಬ್ಯಾಂಕ್ ಲಿ., ಕೇಂದ್ರ ಕಛೇರಿ ಶಿರಸಿ ಇವರು ನಡೆಸಿದ ಮುಂದುವರಿದ ಜಾಹೀರ ಲಿಲಾವಿನಲ್ಲಿ ಶ್ರೀ ರಾಮಣ್ಣ ಹನುಮಂತಪ್ಪ ಜೇಕಿನಕಟ್ಟಿ, ಸಾ ವ ಅಂಚೆ:ಪಾಳಾ, ತಾಲೂಕ: ಮುಂಡಗೋಡ ಇವರು ಖರೀದಿಸಿ, ಖರೀದಿ ರಖಂ ರೂ. 1,04,000/–(ರೂ. ಒಂದು ಲಕ್ಷ ನಾಲ್ಕು ಸಾವಿರ ಮಾತ್ರ)ವನ್ನು ಪಾವತಿ ಮಾಡಿರುತ್ತಾರೆ, ಮತ್ತು ಸದ್ರಿ ವಿಕ್ರಿಯು ನನ್ನಿಂದ ದಿನಾಂಕ 23–04–2011 ರಂದು ಖಾಯಂ ಮಾಡಲ್ಪಟ್ಟಿರುತ್ತದೆ.

**ಸ್ಥಿರಾಸ್ತಿಗಳ ಅನುಬಂಧ :**

| | | |
|---|---|---|
| ನೋಂದಣಿ ಜಿಲ್ಲಾ | : | ಉತ್ತರ ಕನ್ನಡ |
| ತಾಲೂಕು | : | ಮುಂಡಗೋಡ |
| ಗ್ರಾಮ | : | ಜನಗೇರಿ |

**ಸ್ಥಿರಾಸ್ತಿಗಳ ವರ್ಣನೆ**

ಉತ್ತರ ಕನ್ನಡ ಜಿಲ್ಲಾ, ಮುಂಡಗೋಡ ತಾಲೂಕ, ಜನಗೇರಿ ಗ್ರಾಮದಲ್ಲಿರುವ ಸ್ಥಿರಾಸ್ತಿ ರೆವೆನ್ಯೂ ಸರ್ವೇ ನಂಬರ್ 2/2, ಕ್ಷೇತ್ರ 1–00–00–00 ಇದರ ಚಕ್‌ಬಂದಿ ಸರ್ವೇ ಗಡಿಯಂತೆ.

ವಿಕ್ರಿ ಕಿಮ್ಮತ್ತು ಅಂತೂ ರೂ. 1,04,000/– (ರೂ. ಒಂದು ಲಕ್ಷ ನಾಲ್ಕು ಸಾವಿರ ಮಾತ್ರ)

ಮಾರಾಟದ ದಿನಾಂಕ : 01–09–2010

ನನ್ನ ಸಹಿ ಹಾಗೂ ಕಛೇರಿ ಮೊಹರಿನೊಂದಿಗೆ ಇಂದು ದಿನಾಂಕ : 23–04–2011 ರಂದು ಕೊಡಲ್ಪಟ್ಟಿತು.

ಸಹಾಯಕ ನಿಬಂಧಕರು, ಸಹಕಾರ ಸಂಘಗಳು ಮತ್ತು
ಸ್ಥಳ : ಶಿರಸಿ ವಸೂಲಾಧಿಕಾರಿಗಳು ಶಿರ್ಸಿ ಉಪವಿಭಾಗ, ಶಿರ್ಸಿ.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾಧಿಕಾರಿಗಳು, ಶಿರಸಿ ಉಪವಿಭಾಗ, ಶಿರಸಿ ಇವರ ನ್ಯಾಯಾಲಯದಲ್ಲಿ**

**ಫಾರ್ಮ ನಂ. – 11**

**38ನೇಯ ರೂಲಿನ (7) ಕಲಂ**

**ಸ್ಥಿರ ಸ್ವತ್ತುಗಳನ್ನು ಕೊಂಡದ್ದಕ್ಕೆ ಪ್ರಕಟಣೆ**

**ದಾವಾ ಸಂಖ್ಯೆ** : ಕೃ.ಆರ್‌ಸಿಎಸ್/ಡಿಐಎಸ್/ಡಿ–4/ಎಸ್ ಓಯು/1082/03–04

**ಅಮಲ್ಜಾರಿ ಸಂಖ್ಯೆ** : ಎಆರ್ ಇ:ಯುಬಿಎಫ್:39:2005–06 ಎಆರ್ ಇ:ಯುಬಿಎಫ್:ಆರ್ ಓ:654:2006–07 (ವ) (ವ) 207:2006–07

ಉತ್ತರ ಕನ್ನಡ ಜಿಲ್ಲಾ, ಮುಂಡಗೋಡ ತಾಲೂಕ, ಪಾಳಾ ಗ್ರಾಮದ ನಿವಾಸಿ ಶ್ರೀ ರಾಮಣ್ಣ ಹನುಮಂತಪ್ಪ ಜೇಕಿನಕಟ್ಟಿ, ಸಾ:ಪಾಳಾ, ತಾಲೂಕ:ಮುಂಡಗೋಡ ಇವರು ಈ ಕೆಳಗೆ ತೋರಿಸಿದ ಶ್ರೀ ಗೋಪಾಲ ವಿ. ಹೆಗಡೆ, ಸಾ: ಜನಗೇರಿ ತಾಲೂಕ ಮುಂಡಗೋಡ ಇವರಿಗೆ ಸೇರಿದ ಈ ಕೆಳಗೆ ನಮೂದಿಸಿದ ಸ್ಥಿರಾಸ್ತಿಯನ್ನು ಮುಂದುವರಿದ ಬಹಿರಂಗ ಹರಾಜಿನಲ್ಲಿ 2010ನೇ ಇಸವಿ ಸೆಪ್ಟೆಂಬರ್ ತಿಂಗಳ 01ನೇ ತಾರೀಖಿನಂದು ಕ್ರಯಕ್ಕೆ ಕೊಂಡಿರುತ್ತಾರಾಗಿಯೂ ಮತ್ತು ದರಖಾಸ್ತು ರಖಂ ರೂ. 1,04,000/– (ರೂಪಾಯಿ ಒಂದು ಲಕ್ಷ ನಾಲ್ಕು ಸಾವಿರ ಮಾತ್ರ)ವನ್ನು ಸಂಪೂರ್ಣವಾಗಿ ಪಾವತಿ ಮಾಡಿದ್ದರಾಗಿಯೂ ಈ ಮೂಲಕ ಎಲ್ಲಾ ಜನರಿಗೆ ಬಹಿರಂಗವಾಗಿ ತಿಳಿಸೋಣವಾಗುತ್ತದೆ. ಆದಪ್ರಯುಕ್ತ ಸದರ್ ಸ್ಥಿರಾಸ್ತಿಯಲ್ಲಿರುವ ತೀರ್ಪು ಬಾಕಿದಾರ ಶ್ರೀ ಗೋಪಾಲ ವಿ. ಹೆಗಡೆ, ಸಾ : ಜನಗೇರಿ ತಾಲೂಕ : ಮುಂಡಗೋಡ ಇವರ ಸದರಿ ಹಕ್ಕು ವ ಪ್ರಯೋಜನಗಳಿಗೆ ಶ್ರೀ ರಾಮಣ್ಣ ಹನುಮಂತಪ್ಪ ಜೇಕಿನಕಟ್ಟಿ, ಸಾ : ಪಾಳಾ, ತಾಲೂಕ : ಮುಂಡಗೋಡ ಇವರು ಉತ್ತರಾಧಿಕಾರಿಗಳಾಗಿದ್ದಾರೆ, ಎಂಬುದಾಗಿ ಈ ಮೂಲಕ ದೃಢಪಡಿಸೋಣವಾಗುತ್ತದೆ.

| ತಾಲೂಕು | ಗ್ರಾಮ | ರೆವೆನ್ಯೂ ಸರ್ವೇನಂಬರ್ | ಕ್ಷೇತ್ರ | ಖಾತೆದಾರನ ಹೆಸರು |
|---|---|---|---|---|
| ಮುಂಡಗೋಡ | ಜನಗೇರಿ | 2/2 | 1–00–00–00 | ಶ್ರೀ ರಾಮಣ್ಣ ಹನುಮಂತಪ್ಪ ಜೇಕಿನಕಟ್ಟಿ |

ಸ್ಥಳ : ಶಿರಸಿ ಸಹಾಯಕ ನಿಬಂಧಕರು, ಸಹಕಾರ ಸಂಘಗಳು ಮತ್ತು
ದಿನಾಂಕ : 23–04–2011 ವಸೂಲಾಧಿಕಾರಿಗಳು ಶಿರ್ಸಿ ಉಪವಿಭಾಗ, ಶಿರ್ಸಿ.

**ಪಿ.ಆರ್. ನಂ. 553**

**ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿಕೆಗಳು**

**ಸಂಖ್ಯೆ : ಗಭೂಇ : ಗಗುಶಾ : 597 AML 05/10–11/1021, ದಿನಾಂಕ : 11ನೇ ಮೇ 2011**

**ವಿಷಯ:** ಶ್ರೀ ಎಂ. ಎಸ್. ಅರ್ಷದ್ ರವರು ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, ಮುರಾರಿಪುರ ಗ್ರಾಮದ 175.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಮತ್ತು ಮ್ಯಾಂಗನೀಸ್ ಖನಿಜಗಳಿಗಾಗಿ ಸಲ್ಲಿಸಿರುವ ಗಣಿಗುತ್ತಿಗೆ ಅರ್ಜಿ ಬಗ್ಗೆ.

**ಉಲ್ಲೇಖ:** 1. ಈ ಕಛೇರಿ ನೋಟೀಸ್ ಸಂಖ್ಯೆ:ಗಭೂಇ:ಗಗುಶಾ:597 AML 05/6016-17, ದಿನಾಂಕ : 31–03–2010.

2. ಅರ್ಜಿದಾರರ ಪತ್ರ ದಿ: 11–11–2010.

ಮೇಲಿನ ವಿಷಯಕ್ಕೆ ಸಂಬಂಧಪಟ್ಟಂತೆ, ಬಳ್ಳಾರಿ ಜಿಲ್ಲೆ ಸಂಡೂರು ತಾಲ್ಲೂಕು, ಸಂಡೂರು ತಾಲ್ಲೂಕು, ಮುರಾರಿಪುರ ಗ್ರಾಮದ 175.00 ಎಕರೆ ಪ್ರದೇಶದಲ್ಲಿ ಕಬ್ಬಿಣದ ಅದಿರು ಮತ್ತು ಮ್ಯಾಂಗನೀಸ್ ಖನಿಜಗಳಿಗಾಗಿ ಗಣಿ ಗುತ್ತಿಗೆ ಕೋರಿ ಸಲ್ಲಿಸಿರುವ ಅರ್ಜಿ ಸಂಖ್ಯೆ: 597 AML 05ನ್ನು ಪರಿಶೀಲಿಸಲಾಗಿ, ಅರ್ಜಿದಾರರು ಗಣಿಗುತ್ತಿಗೆಗಾಗಿ ಕೋರಿರುವ ಪ್ರದೇಶವು 1327 AML 04ರ ಪ್ರದೇಶಕ್ಕೆ ಅತಿವ್ಯಾಪ್ತಿಯಾಗುತ್ತಿದ್ದ ಕಾರಣ MCR 1960ರ ನಿಯಮ 26(1)ರನ್ವಯ ಅರ್ಜಿದಾರರಿಗೆ ಸೂಚನೆ ಜಾರಿ ಮಾಡಿ, ಅರ್ಜಿಯನ್ನು ತಿರಸ್ಕರಿಸಬಾರದೇಕೆ ಎಂಬುದಕ್ಕೆ ವಿವರಣೆಯನ್ನು ಉಲ್ಲೇಖ (1)ರ ಈ ಕಛೇರಿ ನೋಟೀಸ್‌ನಲ್ಲಿ ಕೇಳಲಾಗಿತ್ತು. ತದನಂತರ ಅರ್ಜಿದಾರರು ದಿನಾಂಕ : 11–11–2010 ರಂದು ಉತ್ತರ ನೀಡಿ, ತಮಗೆ ಅರ್ಜಿಯನ್ನು ಮುಂದುವರೆಸಲು ಇಷ್ಟವಿಲ್ಲವೆಂದು ತಿಳಿಸಿ, ತಾವು ಪಾವತಿಸಿರುವ ರೂ. 3,500/– ಗಳನ್ನು ಮರುಪಾವತಿಸುವಂತೆ ಕೋರಿರುತ್ತಾರೆ.

ಆದರೆ, ಅರ್ಜಿದಾರರು ಪಾವತಿಸಿರುವ ರೂ. 3,500/–ರಲ್ಲಿ (i) ಅರ್ಜಿ ಶುಲ್ಕ ರೂ. 1,000/– ಹಾಗೂ (ii) Processing fee ರೂ. 2,500/– ಆಗಿದ್ದು, ಇವೆರಡನ್ನೂ ಮರುಪಾವತಿಸಲಾಗುವುದಿಲ್ಲ. ಅರ್ಜಿದಾರರ ಕೋರಿಕೆಯ ಮೇರೆಗೆ ಕೆಳಕಂಡ ಆದೇಶ.

**ಆದೇಶ**

ಸರ್ಕಾರದ ಆದೇಶ ಸಂಖ್ಯೆ : ಸಿಐ 03 ಎಂಎಂಎಂ 95 ದಿನಾಂಕ: 27–05–1995 ಮತ್ತು ಸಿಐ 214 ಎಂಎಂಎಂ 2006 ದಿನಾಂಕ: 09–02–2007 ರನ್ವಯ ನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ ಇವರಿಗೆ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ, ಗಣಿಗುತ್ತಿಗೆ ಅರ್ಜಿ ಸಂಖ್ಯೆ 597 ಎಂಎಂಎಲ್ 05ನ್ನು ಮೇಲೆ ವಿವರಿಸಿದ ಕಾರಣಗಳಿಗಾಗಿ ತಿರಸ್ಕರಿಸಲಾಗಿದೆ.

**ಪಿ.ಆರ್. ನಂ. 559**

ನಿರ್ದೇಶಕರು
ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು.

## ಸಹಕಾರ ಇಲಾಖೆ

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಮಧುಗಿರಿ ಉಪವಿಭಾಗ, ಮಧುಗಿರಿ ಇವರ ಕಾರ್ಯಾಲಯದ ಕಾರ್ಯವಾಹಿಗಳು**

**ವಿಷಯ:** ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ ದಾಸರಹಳ್ಳಿ, ಕೊರಟಗೆರೆ ತಾ. ಇದರ ಮಾಜಿ ಕಾರ್ಯದರ್ಶಿ ಬಿ. ವಿ. ಲಿಂಗಪ್ಪ ಇವರ ಪತ್ನಿ ರತ್ನಮ್ಮ ಇವರ ಸ್ಥಿರಾಸ್ಥಿಗಳನ್ನು ಅವರ ಹೆಸರಿಗೆ ಮರುವರ್ಗಾವಣೆ ಮಾಡುವ ಕುರಿತು.

**ಉಲ್ಲೇಖ:** 1. ಈ ಕಛೇರಿ ಆದೇಶ ಪತ್ರದ ಸಂ.ಸ.ಸಂ.ಸ.ನಿ/33/ಎಬಿಎನ್/ಎ.ಎಕ್ಸ್‌ಎನ್./ಸೇಲ್/48/2005–06 ದಿನಾಂಕ 18–05 2006.

2. ಹಾಲು ಉತ್ಪಾದಕರ ಸಹಕಾರ ಸಂಘ (ನಿ.) ದಾಸರಹಳ್ಳಿ, ಕೊರಟಗೆರೆ ತಾಲ್ಲೂಕು ಇವರ ಪತ್ರ ದಿನಾಂಕ 18–10–2010 ಮತ್ತು ದಿನಾಂಕ 23–02–2010.

**ಪ್ರಸ್ತಾವನೆ :**

ಹಾಲು ಉತ್ಪಾದಕರ ಸಹಕಾರ ಸಂಘ ನಿಯಮಿತ, ದಾಸರಹಳ್ಳಿ, ಕೊರಟಗೆರೆ ತಾಲ್ಲೋಕು, ಈ ಸಂಘದಲ್ಲಿ ಶ್ರೀ ಬಿ. ವಿ. ಲಿಂಗಪ್ಪ ಕಾರ್ಯದರ್ಶಿಯಾಗಿದ್ದ ಅವಧಿಯಲ್ಲಿ ಸಂಘದ ಹಣ ದುರುಪಯೋಗಪಡಿಸಿಕೊಂಡಿದ್ದ ಹಿನ್ನೆಲೆಯಲ್ಲಿ ಸಂಘದಿಂದ ದಾವ, ಡಿಕ್ರಿ ಅಮಲ್ಜಾರಿ ಪಡೆದು ಅವರ ಪತ್ನಿ ಹೆಸರಿನಲ್ಲಿದ್ದ 0.30 ಕುಂಟೆ ಖುಷ್ಕಿ ಜಮೀನನ್ನು ಉಲ್ಲೇಖ (1)ರ ಆದೇಶ ಪತ್ರದಲ್ಲಿ ಸಂಘದ ಹೆಸರಿಗೆ ಸ್ಥಿರೀಕರಿಸಿ ವರ್ಗಾವಣೆಗೆ ಆದೇಶ ಮಾಡಿರುತ್ತದೆ.

ಹಾಲು ಉತ್ಪಾದಕರ ಸಹಕಾರ ಸಂಘ ನಿ., ದಾಸರಹಳ್ಳಿ ಇದರ ಕಾರ್ಯದರ್ಶಿಯವರು ಉಲ್ಲೇಖ (2)ರಲ್ಲಿ ಪ್ರಸ್ತಾವೆ ಸಲ್ಲಿಸಿ ಇದೇ ಸಂಘದ ಮಾಜಿ ಕಾರ್ಯದರ್ಶಿ ಶ್ರೀ ಬಿ. ವಿ. ಲಿಂಗಪ್ಪ, ಕಾರ್ಯದರ್ಶಿಯವರಿಂದ ಸಂಘಕ್ಕೆ ಬರಬೇಕಾಗಿದ್ದ ಬಾಕಿ ಯಲ್ಲವನ್ನು ಪಾವ್ತಿಸಿದ್ದು, ಸಂಘದ ಹೆಸರಿಗೆ ವರ್ಗಾವಣೆ ಮಾಡಿಕೊಂಡಿರುವ 0.30 ಕುಂಟೆ ಖುಷ್ಕಿ ಜಮೀನನ್ನು ಶ್ರೀ ಬಿ. ವಿ. ಲಿಂಗಪ್ಪ, ಮಾಜಿ ಕಾರ್ಯದರ್ಶಿ ಇವರ ಪತ್ನಿ ರತ್ನಮ್ಮ ಇವರ ಹೆಸರಿಗೆ ವರ್ಗಾವಣೆ ಮಾಡಿಕೊಡಲು ಸದರಿ ಸಂಘದ ಠರಾವಿನೊಂದಿಗೆ ಸಲ್ಲಿಸಿ ಕೋರಿರುತ್ತಾರೆ.

ಪ್ರಕರಣವನ್ನು ಪರಿಶೀಲಿಸಿದ ಸಂಘದ ಆಡಳಿತ ಮಂಡಳಿ ಸಭೆಯಲ್ಲಿ ಸಂಘದ ಮಾಜಿ ಕಾರ್ಯದರ್ಶಿ ಶ್ರೀ ಬಿ. ವಿ. ಲಿಂಗಪ್ಪ, ಸಂಘದ ಪೂರಾಬಾಕಿ ಹಣವನ್ನು ಬೇಬಾಕಿ ಮಾಡಿರುವ ಕುರಿತು ಸಭೆಯಲ್ಲಿ ಚರ್ಚಿಸಿ, ಸಂಘದ ಹೆಸರಿಗೆ ವರ್ಗಾವಣೆಯಾಗಿರುವ ಶ್ರೀ ಬಿ. ವಿ. ಲಿಂಗಪ್ಪ ಅವರ ಪತ್ನಿ ರತ್ನಮ್ಮ ಇವರ ಹೆಸರಿಗೆ ಮರುವರ್ಗಾವಣೆ ಮಾಡಿಕೊಟ್ಟು ಪ್ರಕರಣವನ್ನು ಖೈದುಗೊಳಿಸಲು ಕೋರಿರುವುದನ್ನು ಪರಿಗಣಿಸಿ ಉಲ್ಲೇಖ (1)ರ ಆದೇಶವನ್ನು ರದ್ದುಪಡಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆ ದೇ ಶ ನಂಸನಿ 33/ABN/E.X.N/ಸೇಲ್/48/2005–06, ದಿನಾಂಕ : 28–02–2011.**

ಶ್ರೀ ಹೆಚ್. ಡಿ. ಶಿವಣ್ಣ, ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು ಮಧುಗಿರಿ ಉಪವಿಭಾಗ ಆದ ನಾನು ಕರ್ನಾಟಕ ರಾಜ್ಯ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38ಎ(15) ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಸಂಖ್ಯೆ ಸಿಎಂಡಬ್ಲ್ಯೂ 201/ CLM/2008 ಬೆಂಗಳೂರು ದಿನಾಂಕ 27–05–2010 ರೀತ್ಯಾ ಅಧಿಕಾರ ಪ್ರತ್ಯಾಯೋಜಿಸಲ್ಪಟ್ಟಿದ್ದು. ಈ ಅಧಿಕಾರವನ್ನು ಉಪಯೋಗಿಸಿ ಹಾಲು ಉತ್ಪಾದಕರ ಸಹಕಾರ ಸಂಘ ನಿ., ದಾಸರಹಳ್ಳಿ, ಕೊರಟಗೆರೆ ತಾಲ್ಲೋಕು ಇದರ ಹೆಸರಿನಲ್ಲಿರುವ ಷೆಡ್ಯೂಲ್ ಸ್ಥಿರಾಸ್ಥಿಗಳನ್ನು ಶ್ರೀ ಬಿ. ವಿ. ಲಿಂಗಪ್ಪ, ಇವರ ಪತ್ನಿ ಶ್ರೀಮತಿ ರತ್ನಮ್ಮ ಹೆಸರಿಗೆ ವರ್ಗಾವಣೆ ಆದೇಶ ನೀಡಿರುತ್ತೇವೆ.

ಸಹಕಾರ ಸಂಘಗಳ ಕಾಯ್ದೆ ಅನ್ವಯ ನಮೂನೆ–8ರ ನಿಗಧಿತ ನಮೂನೆಯಲ್ಲಿ ಸ್ಥಿರ ಸ್ವತ್ತುಗಳ ವರ್ಗಾವಣೆ ಪತ್ರವನ್ನು ಅಲಾಯಿದ ನೀಡಲಾಗಿರುವುದನ್ನು ಈ ಆದೇಶಕ್ಕೆ ಲಗತ್ತಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ದಿನಾಂಕ 28–02–2011 ರಂದು ನೀಡಿದೆ.

ಸ್ಥಿರಾಸ್ತಿ ವಿವರ

| ಕ್ರ.ಸಂ. | ಹಕ್ಕುದಾರನ ಹೆಸರು ಮತ್ತು ವಿಳಾಸ | ಸರ್ವೇ ನಂಬರ್ ವಿಸ್ತೀರ್ಣ | ತರಹೆ | ಚೆಕ್ಕುಬಂದಿ |
|---|---|---|---|---|
| 1. | ಹಾಲು ಉತ್ಪಾದಕರ ಸಹಕಾರ ಸಂಘ ನಿ., ದಾಸರಹಳ್ಳಿ, ಕೊರಟಗೆರೆ ತಾಲ್ಲೋಕು | 14/1 0.30 ಕುಂಟೆ | ಖುಷ್ಕಿ | ಪೂರ್ವಕ್ಕೆ-ಮಹಲಿಂಗಪ್ಪನ ಜಮೀನು<br>ಪಶ್ಚಿಮಕ್ಕೆ-ಬಿ. ಎಸ್. ಚೌಡಯ್ಯನ ಜಮೀನು<br>ಉತ್ತರಕ್ಕೆ-ಬಿ.ಎಸ್. ಚೌಡಯ್ಯನ ಬಣವೆ<br>ದಕ್ಷಿಣಕ್ಕೆ-ಹುಲಿಯಪ್ಪನ ಜಮೀನು |

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ

## "ನಮೂನೆ – 08"

## ಕರ್ನಾಟಕ ಸಹಕಾರ ಸಂಘಗಳ ನಿಯಮ 1960:38ಎ (15)ರ ರೀತ್ಯಾ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 101ರ ಅನ್ವಯ ಬಾಕಿಯ ತೀರ್ವಳಿ ಮಾಡಿರುವ ಪ್ರಮಾಣ ಪತ್ರ.

ತುಮಕೂರು ಜಿಲ್ಲೆ, ಕೊರಟಗೆರೆ ತಾಲ್ಲೋಕು ಕಸಬಾ ಹೋಬಳಿ ಭಕ್ತರಹಳ್ಳಿ ಗ್ರಾಮದ ವಾಸಿ ಶ್ರೀಮತಿ ರತ್ನಮ್ಮ ಕೋಂ ಬಿ. ವಿ. ಲಿಂಗಪ್ಪ ಇವರ ಹೆಸರಿನಲ್ಲಿದ್ದ ಸ್ಥಿರಾಸ್ತಿಯನ್ನು ದಿನಾಂಕ 18-05-2006ರ ಆದೇಶದಲ್ಲಿ, ಹಾಲು ಉತ್ಪಾದಕರ ಸಹಕಾರ ಸಂಘ ನಿ., ದಾಸರಹಳ್ಳಿ, ಕೊರಟಗೆರೆ ತಾಲ್ಲೋಕು ಈ ಸಂಘದ ಹೆಸರಿಗೆ ಈ ಕೆಳಕಂಡ ಷೆಡ್ಯೂಲ್ ಸ್ವತ್ತುಗಳನ್ನು ಸ್ಥಿರೀಕರಣಗೊಳಿಸಿ ಆದೇಶ ನೀಡಲಾಗಿತ್ತು. ಸಂಘದ ಕಾರ್ಯದರ್ಶಿಯವರು ದಿನಾಂಕ 18-10-2010ರಂದು ಪತ್ರದಲ್ಲಿ ಸಂಘದ ಮಾಜಿ ಕಾರ್ಯದರ್ಶಿ ಶ್ರೀ ಬಿ. ವಿ. ಲಿಂಗಪ್ಪನವರಿಂದ ಬರಬೇಕಾಗಿದ್ದ ಪೂರಾ ಹಣ ಸಂದಾಯವಾಗಿದ್ದು, ಮೂಲ ಹಕ್ಕುದಾರರ ಹೆಸರಿಗೆ ಮರುವರ್ಗಾಯಿಸುವಂತೆ ಕೋರಿ ಬಂದಿರುವ ಪ್ರಸ್ತಾವೆ ಬಗ್ಗೆ ನಾನು ಸಮಾಧಾನ ಹೊಂದಿರುತ್ತೇನೆ. ಪ್ರಯುಕ್ತ-ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 101 ಮತ್ತು ನಿಯಮ 38(ಎ) (15)ರ ಮೇರೆಗೆ ಈ ಕೆಳಕಾಣಿಸಿರುವ ಸದರಿ ಸ್ಥಿರ ಸ್ವತ್ತುಗಳನ್ನು ಮೂಲ ಹಕ್ಕುದಾರಳಾದ ಶ್ರೀಮತಿ ರತ್ನಮ್ಮ ಕೋಂ ಬಿ. ವಿ. ಲಿಂಗಪ್ಪ, ಭಕ್ತರಹಳ್ಳಿ, ಕೊರಟಗೆರೆ ತಾಲ್ಲೋಕು, ಇವರ ಹೆಸರಿಗೆ ಮರುವರ್ಗಾವಣೆ ಮಾಡಿ ಈ ಆದೇಶ ನೀಡಲಾಗಿದೆ.

ಸ್ಥಿರಾಸ್ತಿ ವಿವರ

| ಕ್ರ.ಸಂ. | ಹಕ್ಕುದಾರನ ಹೆಸರು ಮತ್ತು ವಿಳಾಸ | ಸರ್ವೇ ನಂಬರ್ ವಿಸ್ತೀರ್ಣ | ತರಹೆ | ಚೆಕ್ಕುಬಂದಿ |
|---|---|---|---|---|
| 1. | ಹಾಲು ಉತ್ಪಾದಕರ ಸಹಕಾರ ಸಂಘ ನಿ., ದಾಸರಹಳ್ಳಿ, ಕೊರಟಗೆರೆ ತಾಲ್ಲೋಕು | 14/1 0.30 ಕುಂಟೆ | ಖುಷ್ಕಿ | ಪೂರ್ವಕ್ಕೆ-ಮಹಲಿಂಗಪ್ಪನ ಜಮೀನು<br>ಪಶ್ಚಿಮಕ್ಕೆ-ಬಿ. ಎಸ್. ಚೌಡಯ್ಯನ ಜಮೀನು<br>ಉತ್ತರಕ್ಕೆ-ಬಿ.ಎಸ್. ಚೌಡಯ್ಯನ ಬಣವೆ<br>ದಕ್ಷಿಣಕ್ಕೆ-ಹುಲಿಯಪ್ಪನ ಜಮೀನು |

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಮಧುಗಿರಿ ಉಪವಿಭಾಗ, ಮಧುಗಿರಿ.

**ಪಿ.ಆರ್. 560**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ), ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ. 1, ಆಲಿ ಆಸ್ಕರ್ ರಸ್ತೆ, ಬೆಂಗಳೂರು, ಇವರ ನಡವಳಿಗಳು.

**ವಿಷಯ:** ಸಮಾಪನೆಗೊಂಡಿರುವ ಸೀ ಐಲ್ಯಾಂಡ್ ಹತ್ತಿ ಬೆಳೆಗಾರರ ಸಹಕಾರ ಸಂಘ ನಿ., ಪಿರಿಯಾಪಟ್ಟಣ, ಪಿರಿಯಾಪಟ್ಟಣ ತಾಲ್ಲೂಕು. ಈ ಸಂಘದ ನೋಂದಣಿಯನ್ನು ರದ್ದುಗೊಳಿಸುವ ಕುರಿತು.

**ಉಲ್ಲೇಖ:**
1. ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ : ಎಸ್‌ಎಲ್‌ಕ್ಯೂ/5/1982-83, ದಿನಾಂಕ: 16-06-1994.
2. ಸಹಕಾರ ಸಂಘಗಳ ಉಪ ನಿಬಂಧಕರು, ಮೈಸೂರು ಜಿಲ್ಲೆ, ಮೈಸೂರು ರವರ ಪ್ರಸ್ತಾವನೆ ಸಂಖ್ಯೆ : ಡಿಆರ್‌ಎಂ/ಬಿ-4/ಎಲ್ ಕ್ಯೂಡಿ/ಪಿಆರ್-168/2010-11, ದಿನಾಂಕ: 31-03-2011.
3. ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ರವರ ಪತ್ರ ಸಂಖ್ಯೆ : ಜೆಆರ್‌ಎಂ/ಬಿ-2/ಸಮಾಪನೆ/1411/2003-04. ದಿನಾಂಕ: 18-04-2011.

ಪ್ರಸ್ತಾವನೆ :

ಮೈಸೂರು ಜಿಲ್ಲೆ ಸೀ ಐಲ್ಯಾಂಡ್ ಹತ್ತಿ ಬೆಳೆಗಾರರ ಸಹಕಾರ ಸಂಘ ನಿಯಮಿತ, ಪಿರಿಯಾಪಟ್ಟಣ, ಪಿರಿಯಾಪಟ್ಟಣ ತಾಲ್ಲೂಕು. ಈ ಸಂಘವು ನೋಂದಣಿ ಸಂಖ್ಯೆ: 842, ಡಿ.ವೈ.ಆರ್.ಮೈ 62–63, ಮೈಸೂರು, ದಿನಾಂಕ: 11–06–1962ರಲ್ಲಿ ನೋಂದಣಿಯಾಗಿರುತ್ತದೆ. ಸದರಿ ಸಂಘವು ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ರೀತ್ಯಾ ಹಾಗೂ ಸಂಘದ ಸದಸ್ಯರ ಹಿತದೃಷ್ಠಿಯಿಂದ ಕಾರ್ಯನಿರ್ವಹಿಸದೇ ಕೆಲವು ವರ್ಷಗಳಿಂದ ಸ್ಥಗಿತಗೊಂಡ ಪ್ರಯುಕ್ತ ಈ ಕಛೇರಿಯ ಉಲ್ಲೇಖಿತ (1)ರ ಆದೇಶದಲ್ಲಿ ಸಂಘವನ್ನು ಸಮಾಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಪಿರಿಯಾಪಟ್ಟಣ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿರುತ್ತದೆ. ಸದರಿ ಸಮಾಪನಾಧಿಕಾರಿಯವರು ದಿನಾಂಕ: 23–03–2011ಕ್ಕೆ ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ಶೂನ್ಯಗೊಳಿಸಿ ಸಂಘದ ನೊಂದಣಿ ಸಂಖ್ಯೆಯನ್ನು ರದ್ದುಗೊಳಿಸುವ ಸಂಬಂಧ ಯಾವುದೇ ಆಕ್ಷೇಪಣೆಗಳು ಇದ್ದಲ್ಲಿ ಲಿಖಿತ ಹೇಳಿಕೆ ಸಲ್ಲಿಸುವಂತೆ ದಿನಾಂಕ: 05–03–2011ರಂದು ಸಾರ್ವಜನಿಕ ಪ್ರಕಟಣೆ ಹೊರಡಿಸಿರುವುದಾಗಿ ಸದರಿ ಪ್ರಕಟಣೆಗೆ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿರುವುದಿಲ್ಲದ ಕಾರಣ ಸಂಘದ ನೋಂದಣಿಯನ್ನು ರದ್ದುಗೊಳಿಸುವಂತೆ ಪ್ರಸ್ತಾವೆ ಸಲ್ಲಿಸಿರುವುದಾಗಿ ಉಲ್ಲೇಖಿತ (3)ರ ಪತ್ರದಲ್ಲಿ ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು ರವರು ತಿಳಿಸಿರುತ್ತಾರೆ.

ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರುರವರು ಸಲ್ಲಿಸಿರುವ ಪ್ರಸ್ತಾವೆಯನ್ನು ಪರಿಶೀಲಿಸಿ ಸಂಘದ ಆಸ್ತಿ–ಜವಾಬ್ದಾರಿಗಳು ಶೂನ್ಯವಾಗಿರುವುದನ್ನು ಖಚಿತ ಪಡಿಸಿಕೊಂಡು ಸಂಘವನ್ನು ಮುಂದುವರೆಸಿಕೊಂಡು ಹೋಗುವುದರಿಂದ ಸಂಘದ ಸದಸ್ಯರಿಗೆ ಮತ್ತು ಸಾರ್ವಜನಿಕರಿಗೆ ಯಾವುದೇ ಪ್ರಯೋಜನವಿಲ್ಲವೆಂದು ಅಭಿಪ್ರಾಯಪಟ್ಟು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಪ್ರಕರಣ 75ರ ರೀತ್ಯಾ ಸಂಘದ ನೋಂದಣಿಯನ್ನು ರದ್ಧತಿ ಮಾಡಿ ಸಂಘವನ್ನು ವಿಸರ್ಜಿಸಲು ಉಲ್ಲೇಖ (3)ರಲ್ಲಿ ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ, ಮೈಸೂರು. ಇವರು ಶಿಫಾರಸ್ಸು ಮಾಡಿರುತ್ತಾರೆ.

ಸಮಾಪನಾಧಿಕಾರಿಯು ಸಂಘದ ಸಮಾಪನಾ ಕಾರ್ಯವನ್ನು ಪೂರ್ಣಗೊಳಿಸಿರುವುದನ್ನು ಪರಿಗಣಿಸಿ ಸದರಿ ಸಂಘದ ನೋಂದಣಿಯನ್ನು ರದ್ದುಗೊಳಿಸುವುದು ಸೂಕ್ತವೆಂದು ಮನಗೊಂಡು ಈ ಕೆಳಕಂಡ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ : ಆರ್‌ಸಿಎಸ್/ಎಸ್‌ಎಲ್ ಕ್ಯೂ/5/1982–83, ದಿನಾಂಕ: 19–05–2011**

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಒ–139/ಸಿಎಲ್‌ಎಂ/2010, ದಿನಾಂಕ: 17–02–2011ರಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಕೆ.ಹೆಚ್. ತಿಮ್ಮಯ್ಯ, ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ) ಆದ ನಾನು ಸೀ ಐಲ್ಯಾಂಡ್ ಹತ್ತಿ ಬೆಳೆಗಾರರ ಸಹಕಾರ ಸಂಘ ನಿ., ಪಿರಿಯಾಪಟ್ಟಣ, ಪಿರಿಯಾಪಟ್ಟಣ ತಾಲ್ಲೂಕು, ಮೈಸೂರು ಜಿಲ್ಲೆ. ಈ ಸಂಘದ ನೋಂದಣಿ ಸಂಖ್ಯೆ : 842/ಡಿವೈಆರ್‌ವೈ/62–63, ಮೈಸೂರು, ದಿನಾಂಕ : 11–06–1962ನ್ನು ರದ್ದುಗೊಳಿಸಿ ಸಂಘವನ್ನು ವಿಸರ್ಜಿಸಿ ಆದೇಶಿಸಿದ್ದೇನೆ.

ವಿರ್ಸಜನೆಗೊಂಡ ಸಂಘದ ದಾಖಲಾತಿಗಳನ್ನು ಸಂಬಂಧಿಸಿದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿಯಲ್ಲಿ ಇಡತಕ್ಕದ್ದು.

ಈ ಆದೇಶವನ್ನು ಈ ದಿನ ಅಂದರೆ ದಿನಾಂಕ : 19–05–2011 ರಂದು ನನ್ನ ಸಹಿ ಹಾಗೂ ಕಛೇರಿಯ ಮೊಹರಿನೊಂದಿಗೆ ಹೊರಡಿಸಲಾಗಿದೆ.

**ಕೆ. ಹೆಚ್. ತಿಮ್ಮಯ್ಯ,**
ಸಹಕಾರ ಸಂಘಗಳ ಅಪರ ನಿಬಂಧಕರು,
(ಬಳಕೆ ಮತ್ತು ಮಾರಾಟ)

**ಪಿ.ಆರ್. ನಂ. 566**

## COMMERCIAL TAXES DEPARTMENT

### PROCEEDINGS OF THE COMMISSIONER OF COMMERCIAL TAXES, (KARNATAKA), BANGALORE-CLARIFICATION UNDER SECTION 59(4) OF THE KARNATAKA VALUE ADDED TAX ACT, 2003.

**Subject** : KVAT Act, 2003-Clarification under Section 59(4) regarding the rate of tax applicable on certain commodities-reg.,

**Ref. :** Application dated: 17-02-2011 of Sri R. Durairaj, Managing Partner of Deccan Trading Corporation, 120, First Floor, Hoodi Apartments, Cunningham Road, Bangalore-52

1. In the application cited above, Sri R. Durairaj, Managing Partner of Deccan Trading Corporation, Bangalore, has sought clarification regarding the rate of tax applicable on certain commodities

2. Section 59(4) of the Karnataka Value Added Tax Act, 2003 empowers the Commissioner of Commercial Taxes to clarify the rate of tax payable under the Act, if he considers it necessary or expedient so to do, for the purpose of maintaining uniformity in the work of assessments and collection of revenue. It is examined and found that the clarification requested by the petitioner is within the scope of the aforesaid provision and it is necessary that the clarification be issued for the purpose of maintaining uniformity in the work of assessments and collection of revenue.

3. Hence the following clarification is issued.

**CLARIFICATION NO. CLR.CR.232/10-11, DATED 03-05-2011**

It is hereby clarified that the rates of tax applicable on the following goods are as indicated under:

| Sl. No. | Goods | Rate of tax/Section |
|---|---|---|
| 1. | Filters for earth moving machinery | 5% in terms of notification No. FD 316 CSL 2005 (1), dated : 05-08-2005 read with entry 20 of the Third Schedule to the KVAT Act, 2003. |
| 2. | Air cleaner assembly for earth moving machinery. | |
| 3. | Air kit for earth moving machinery | |
| 4. | Diesel coil for earth moving machinery | |

**PRADEEP SINGH KHAROLA,**
Commissioner of Commercial Taxes,
(Karnataka), Bangalore

**P.R. No. 568**

**ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಬಹುಮಹಡಿ ಕಟ್ಟಡ, ಬೆಂಗಳೂರು**

**ಸಂಖ್ಯೆ : ಆಸಾಂನಿ/10/ಬೆಕಂಸೂ/2011, ಬೆಂಗಳೂರು, ದಿನಾಂಕ: 2ನೇ ಏಪ್ರಿಲ್, 2011**

**ವಿಷಯ:** ಕರ್ನಾಟಕ ರಾಜ್ಯದ 2011 ಫೆಬ್ರವರಿ ಮಾಹೆಯ ಔದ್ಯಮಿಕ ಕಾರ್ಮಿಕರ ಗ್ರಾಹಕ ಬೆಲೆ ಸೂಚ್ಯಂಕ.

2011ರ ಫೆಬ್ರವರಿ ಮಾಹೆಯ ಕರ್ನಾಟಕ ರಾಜ್ಯದ 16 ಕೇಂದ್ರಗಳ (ರಾಜ್ಯ ಸರಣಿಯ 11 ಮತ್ತು ಕೇಂದ್ರ ಸರಣಿಯ 5 ಕೇಂದ್ರಗಳು) ಔದ್ಯಮಿಕ ಕಾರ್ಮಿಕರ ಗ್ರಾಹಕ ಬೆಲೆ ಸೂಚ್ಯಂಕ ಮತ್ತು ಅಖಿಲ ಭಾರತ ಔದ್ಯಮಿಕ ಕಾರ್ಮಿಕರ ಗ್ರಾಹಕ ಬೆಲೆಗಳ ಸೂಚ್ಯಂಕಗಳು ಈ ಕೆಳಗಿನಂತಿವೆ.

| ಕ್ರಮ ಸಂಖ್ಯೆ | ಕೇಂದ್ರಗಳು | ಪರಿವರ್ತನಾ ಅಪವರ್ತ್ಯ (Linking factor) 1960ರ ಶ್ರೇಣಿ | ಸಾಮಾನ್ಯ ಸೂಚ್ಯಂಕ | |
|---|---|---|---|---|
| | | | ಜನವರಿ 2011 | ಫೆಬ್ರವರಿ 2011 |
| **ಅ** | **ರಾಜ್ಯ ಸರಣಿ (ಆಧಾರಿತ ವರ್ಷ : 1987–88=100** | | | |
| 1. | ಬಳ್ಳಾರಿ | 7.39 | 466 | 468 |
| 2. | ಭದ್ರಾವತಿ | 9.19 | 460 | 463 |
| 3. | ದಾವಣಗೆರೆ | 8.27 | 511 | 512 |
| 4. | ದಾಂಡೇಲಿ | – | 485 | 489 |
| 5. | ಗುಲ್ಬರ್ಗಾ | 8.26 | 436 | 439 |
| 6. | ಹರಿಹರ | 8.56 | 418 | 422 |
| 7. | ಹಾಸನ | 9.25 | 469 | 472 |
| 8. | ಮಂಡ್ಯ | 7.92 | 497 | 500 |
| 9. | ಮಂಗಳೂರು | 9.31 | 458 | 461 |
| 10. | ರಾಯಚೂರು | – | 521 | 521 |
| 11. | ತುಮಕೂರು | – | 409 | 406 |
| **ಆ** | **ಕೇಂದ್ರ ಸರಣಿ : ಆಧಾರಿತ ವರ್ಷ : 2001=100** | **(1982ರ ಶ್ರೇಣಿ)** | | |
| 12. | ಬೆಂಗಳೂರು | 4.51 | 196 | 187 |
| 13. | ಬೆಳಗಾಂ | 5.02 | 195 | 194 |
| 14. | ಹುಬ್ಬಳ್ಳಿ–ಧಾರವಾಡ | 4.71 | 193 | 191 |
| 15. | ಮಡಿಕೇರಿ | 4.47 | 187 | 181 |
| | | **(1987–88 ಶ್ರೇಣಿ)** | | |
| 16. | ಮೈಸೂರು | 2.50 | 185 | 179 |
| | ಅಖಿಲ ಭಾರತ | 4.63 | 188 | 185 |

**ಸೂಚನೆ :** 1) ಸೂಚ್ಯಂಕವನ್ನು ಒಂದು ಗೊತ್ತಾದ ಕೇಂದ್ರದಲ್ಲಿ ಕಾಲದಿಂದ ಕಾಲಕ್ಕೆ ಗ್ರಾಹಕರ ಸರಾಸರಿ ಬೆಲೆಯಲ್ಲಿ ಕಂಡುಬರುವ ವ್ಯತ್ಯಾಸವನ್ನು ತಿಳಿಯಲು ಉಪಯೋಗಿಸಬಹುದೇ ವಿನಃ ಸೂಚ್ಯಂಕವನ್ನು ಕೇಂದ್ರದಿಂದ ಕೇಂದ್ರಕ್ಕೆ ಹೋಲಿಸಲಾಗುವುದಿಲ್ಲ.

2) ಸೂಚ್ಯಂಕವನ್ನು ಕಳುಹಿಸಲು ಸ್ವವಿಳಾಸದ ಸ್ಟಾಂಪ್ ಸಹಿತ ಅಂಚೆ ಲಕೋಟೆಯನ್ನು ಕಳುಹಿಸಬೇಕಾಗಿ ವಿನಂತಿ.

. . . . . .

ನಿರ್ದೇಶಕರ ಪರವಾಗಿ

## DIRECTORATE OF ECONOMICS AND STATISTICS, BANGALORE-1

**Consumer Price Index Numbers for Industrial Workers**

**No. DES 10 PWX 2011** **Month : February**

**State : Karnataka** **Base : 1987-88=100** **Date : 02-04-2011**

| | Group/Sub-Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Raichur | Tumkur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| I | **FOOD :** | | | | | | | | | | | |
| | (a) Cereals & Products | 607 | 598 | 684 | 618 | 605 | 586 | 598 | 634 | 555 | 662 | 640 |
| | (b) Pulses & Products | 571 | 634 | 666 | 727 | 583 | 669 | 636 | 672 | 633 | 565 | 626 |
| | (c) Oil & Fats | 358 | 354 | 371 | 338 | 321 | 371 | 312 | 386 | 294 | 322 | 354 |
| | (d) Meat, Fish & Eggs | 651 | 618 | 725 | 549 | 715 | 694 | 618 | 689 | 957 | 771 | 684 |
| | (e) Milk & Products | 454 | 433 | 505 | 485 | 449 | 485 | 448 | 526 | 445 | 499 | 449 |
| | (f) Condiments & Spices | 612 | 666 | 852 | 804 | 558 | 530 | 622 | 618 | 565 | 716 | 612 |
| | (g) Vegetables & Fruits | 755 | 539 | 590 | 697 | 542 | 640 | 695 | 588 | 509 | 499 | 710 |
| | (h) Other Food | 503 | 628 | 573 | 615 | 541 | 484 | 498 | 530 | 451 | 508 | 515 |
| | **FOOD GROUP INDEX** | 574 | 570 | 636 | 605 | 550 | 550 | 558 | 602 | 574 | 590 | 580 |
| II | Pan, Supari, Tobacco & Intoxicants | 487 | 670 | 648 | 426 | 416 | 535 | 568 | 517 | 369 | 451 | 549 |
| III | Fuel & Light | 444 | 406 | 473 | 613 | 494 | 451 | 456 | 511 | 363 | 626 | 374 |
| IV | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V | Clothing, Bedding & Footwear | 279 | 284 | 330 | 396 | 338 | 244 | 428 | 499 | 261 | 602 | 233 |
| VI | **Miscellaneous:** | | | | | | | | | | | |
| | (a) Medical Care | 663 | 870 | 402 | 457 | 359 | 253 | 456 | 388 | 358 | 429 | 242 |
| | (b) Education, Recreation & Amusement | 571 | 469 | 765 | 261 | 471 | 472 | 563 | 462 | 667 | 750 | 548 |
| | (c) Transport & Communication | 557 | 552 | 540 | 397 | 574 | 556 | 505 | 575 | 467 | 494 | 509 |
| | (d) Personal Care & effects | 337 | 355 | 422 | 351 | 403 | 325 | 349 | 359 | 367 | 334 | 346 |
| | (e) Others | 399 | 459 | 469 | 508 | 371 | 297 | 355 | 417 | 340 | 565 | 314 |
| | Miscellaneous Group | 474 | 476 | 512 | 398 | 420 | 348 | 427 | 423 | 427 | 500 | 375 |
| | **GENERAL INDEX** | 468 | 463 | 512 | 489 | 439 | 422 | 472 | 500 | 461 | 521 | 406 |
| | To convert to Base 1960 Multiply by Linking Factor | 7.39 | 9.19 | 8.27 | - | 8.26 | 8.56 | 9.25 | 7.92 | 9.31 | - | - |

. . . . . . . .

**P.R. No. 435** For Director.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

### ಅಧಿಸೂಚನೆ

**ಸಂಖ್ಯೆ:ಆಕುಕ 25 ಪಿಟಿಡಿ 2010, ಬೆಂಗಳೂರು, ದಿನಾಂಕ:18–04–2011**

ಆಯುಷ್ ಇಲಾಖೆಯಲ್ಲಿ ಪ್ರಾಧ್ಯಾಪಕರು (ಯುನಾನಿ) ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಆಕುಕ 25 ಪಿಟಿಡಿ 2010, ದಿನಾಂಕ:19–05–2010 ರಲ್ಲಿ ಪ್ರಕಟಿಸಿ, ಬಾಧಿತರಿಂದ ಆಕ್ಷೇಪಣೆಗಳನ್ನು ಆಹ್ವಾನಿಸಲಾಗಿತ್ತು. ಆದರೆ, ಸದರಿ ತಾತ್ಕಾಲಿಕ ಜೇಷ್ಠತಾ ಪಟ್ಟಿ ಪ್ರಕಟಣೆಗೆ ಯಾವುದೇ ಆಕ್ಷೇಪಣೆಗಳನ್ನು ನಿಗದಿತ ಕಾಲಾವಧಿಯಲ್ಲಿ ಸ್ವೀಕರಿಸಿರುವುದಿಲ್ಲ.

ಆದುದರಿಂದ, ಪ್ರಾಧ್ಯಾಪಕರು (ಯುನಾನಿ) ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ:01–01–2010 ರಲ್ಲಿರುವಂತೆ ಸಿದ್ಧಪಡಿಸಿ ಅನುಬಂಧದಲ್ಲಿ ಇದರೊಂದಿಗೆ ಲಗತ್ತಿಸಿ ಅಂತಿಮವಾಗಿ ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎಸ್. ಇಟಗಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ

### ಅನುಬಂಧ

**ದಿನಾಂಕ:01–01–2010 ರಲ್ಲಿರುವಂತೆ ಆಯುಷ್ ಇಲಾಖೆಯ ಪ್ರಾಧ್ಯಾಪಕರು (ಯುನಾನಿ) ವೃಂದದ ಅಂತಿಮ ಜೇಷ್ಠತಾ ಪಟ್ಟಿ.**

| ಕ್ರ. ಸಂ. | ಹೆಸರು ಶ್ರೀ / ಶ್ರೀಮತಿ | ನೇರ ನೇಮಕಾತಿ / ಮುಂಬಡ್ತಿ / ಇತರೆ | ಮೀಸಲಾತಿ / ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ನೇಮಕಾತಿಗೆ / ಜೇಷ್ಠತೆಗೆ ನೈಜ ಅರ್ಹತೆ ದಿನಾಂಕ | ಷರಾ |
|---|---|---|---|---|---|---|---|---|
| 1 | ಡಾ:ಮಹಮದ್ ಮುಜೀಬುರ್ ರೆಹಮಾನ್ | ಮುಂಬಡ್ತಿ | ಸಾಮಾನ್ಯ | 01–11–51 | 07–12–81 | 04–06–1993 | 04–06–1993 | |
| 2 | ಡಾ:ಇಕ್ಬಾಲ್ ಹೆಚ್.ಎಂ. ಮೆಮೂನ್ | ಮುಂಬಡ್ತಿ | ಸಾಮಾನ್ಯ | 20–11–51 | 09–09–81 | 04–06–1993 | 04–06–1993 | |
| 3 | ಡಾ:ಇಫ್ತಿಕಾರುದ್ದೀನ್ | ಮುಂಬಡ್ತಿ | ಸಾಮಾನ್ಯ | 10–06–56 | 22–07–81 | 16–07–1996 | 16–07–1996 | |
| 4 | ಡಾ:ಸೈಯದ್ ಅನೀಸ್ ಅಹಮದ್ | ಮುಂಬಡ್ತಿ | ಸಾಮಾನ್ಯ | 08–06–54 | 10–02–83 | 29–07–1999 | 29–07–1999 | |
| 5 | ಡಾ:ಮುಸ್ತರಿಬಾನು | ಮುಂಬಡ್ತಿ | ಸಾಮಾನ್ಯ | 06–10–53 | 22–07–81 | 14–02–2000 | 14–02–2000 | |
| 6 | ಡಾ:ಸೈಯದ್ ಸೈಫುದ್ದೀನ್ ಖಾಲಿದ್ | ಮುಂಬಡ್ತಿ | ಸಾಮಾನ್ಯ | 16–03–57 | 19–07–81 | 05–01–2002 | 05–01–2002 | |
| 7 | ಡಾ:ಶಕೀಲಾ ಬಾನು | ಮುಂಬಡ್ತಿ | ಸಾಮಾನ್ಯ | 02–05–60 | 07–12–85 | 19–06–2005 | 19–06–2005 | |
| 8 | ಡಾ:ಜಿಯಾವುದ್ದೀನ್ ಎಸ್. | ಮುಂಬಡ್ತಿ | ಸಾಮಾನ್ಯ | 07–12–57 | 21–07–81 | 19–06–2005 | 19–06–2005 | |
| 9 | ಡಾ:ಎಸ್. ರಫೀಖುಲ್ಲಾ | ಮುಂಬಡ್ತಿ | ಸಾಮಾನ್ಯ | 02–01–51 | 28–04–82 | 19–06–2005 | 19–06–2005 | |

**ಆರ್.ಎಸ್. ಇಟಗಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ

**ಪಿ. ಆರ್. ನಂ. 470**

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ತುಮಕೂರು ಉಪವಿಭಾಗ, ತುಮಕೂರು ಇವರ ನಡವಳಿಕೆಗಳು**

**ಅಮಲ್ಜಾರಿ ಪ್ರಕರಣ ಸಂ. 222/2004-05**

**ಬಿಡ್‌ದಾರರು:-ಶ್ರೀಮತಿ ಆರ್. ಆಶಾ ಕೋಂ ಆರ್. ರಮೇಶ್ ತುಮಕೂರು**

| **ಡಿಕ್ರಿ ಹೋಲ್ಡರ್** | **ವಿರುದ್ದ** | **ತೀರ್ಪು ಋಣಿಗಳು** |
|---|---|---|
| ಕಾರ್ಯದರ್ಶಿ | | ಶ್ರೀ ಕುಮಾರ್ ಬಿನ್ ರಂಗಸ್ವಾಮಯ್ಯ |
| ಶ್ರೀ ಕನಕ ಪತ್ತಿನ ಸಹಕಾರ ಸಂಘ ನಿ., ತುಮಕೂರು | | ಪಂಚನಾಥರಾಯರಪಾಳ್ಯ, ಶಿರಾಗೇಟ್, ಅಂಚೆ, ತುಮಕೂರು |

**ಪ್ರಸ್ತಾವನೆ:**

ಕಾರ್ಯದರ್ಶಿ ಶ್ರೀ ಕನಕ ಪತ್ತಿನ ಸಹಕಾರ ಸಂಘ ನಿ., ತುಮಕೂರು ಇವರು ತೀರ್ಪುಋಣಿಗಳಿಂದ ವಸೂಲಾಗಬೇಕಾದ ಸ್ಥಿರಾಸ್ತಿ ಆಧಾರ ಸಾಲ ರೂ. 4,05,000/-ಗಳ ವಸೂಲಾತಿಗಾಗಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ತುಮಕೂರು ಉಪ ವಿಭಾಗ, ತುಮಕೂರು ಇವರ ನ್ಯಾಯಾಲಯದಲ್ಲಿ ದಾವೆ ಹೂಡಿದ್ದು, ದಾವೆ ನಂ. ಎಆರ್‌ಟಿ/21/2004-05 ದಿನಾಂಕ : 14-06-2004ರಂತೆ ಡಿಕ್ರಿ ಪಡೆದಿದ್ದು, ನಂತರ ಈ ಹಣದ ವಸೂಲಾತಿಗಾಗಿ ಅಮಲ್ಜಾರಿ ಅರ್ಜಿಹಾಕಿದ್ದು, ಸದರಿ ಅಮಲ್ಜಾರಿ ಅರ್ಜಿ ಸಂಖ್ಯೆ 222/2004-05 ದಿ. 04-08-2004 ಮೊಬಲಗು 2,23,460-00 ಸದರಿ ಅಮಲ್ಜಾರಿಯನ್ನು ಮಾರಾಟಾಧಿಕಾರಿ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ ತುಮಕೂರು ಇವರಿಗೆ ವಹಿಸಿದ್ದು, ಸುಸ್ತಿದಾರರಿಂದ ಬಾಕಿ ಹಣದ ವಸೂಲಾತಿಗಾಗಿ ಸಂಘಕ್ಕೆ ಆಧಾರ ಮಾಡಿಕೊಟ್ಟ ಸ್ಥಿರ ಸ್ವತ್ತನ್ನು ಹರಾಜಿನ ಮೂಲಕ ಮಾರಾಟ ಮಾಡಲು ನಮೂನೆ 8 ಮತ್ತು 9ನ್ನು ದಿ. 13-06-2005, 10-11-2005 ಮತ್ತು 21-03-2006ರ ದಿನಾಂಕಗಳ ನೋಟೀಸನ್ನು ತೀರ್ಪುಋಣಿದಾರರಿಗೆ ಜಾರಿಮಾಡಲಾಗಿರುವುದನ್ನು ಗಮನಿಸಲಾಗಿದೆ. ಮತ್ತು ನಿಗಧಿ ಪಡಿಸಿದ ದಿನಾಂಕಗಳಂದು ಸ್ಥಿರ ಸ್ವತ್ತಿನ ಹರಾಜು ಪ್ರಕ್ರಿಯೆ ನಡೆದಿರುವುದಿಲ್ಲ, ಕಾರಣ ಆ ದಿವಸ ಬಿಡ್ಡುದಾರರು ಯಾರು ಬಾರದ್ದರಿಂದ ಹರಾಜನ್ನು ಮುಂದೂಡಲಾಗಿರುತ್ತದೆ. ನಂತರ ಪುನಃ ದಿ. 30-12-2010 ರಂದು ಈ ಪ್ರಕರಣದ ಸುಸ್ತಿ ಸಾಲದ ವಸೂಲಿಗೆ ಸ್ಥಿರಾಸ್ತಿ ಹರಾಜನ್ನು ನಿಗದಿಪಡಿಸಿ ಸಾಲಗಾರರ ಪರವಾಗಿ ಸಂಬಂಧಪಟ್ಟ ಎಲ್ಲರಿಗೂ ನೋಟಿಸು ಜಾರಿ ಮಾಡಲಾಯಿತು. ಹರಾಜು ಇಸ್ತಿಹಾರನ್ನು ಸಾಲಗಾರರ ವಾಸವಿರುವ ಬಡಾವಣೆ, ಸ್ಥಿರಾಸ್ತಿ ಮುಂತಾದ ಭಾಗಗಳಲ್ಲಿ ಹಂಚಲಾಗಿರುತ್ತದೆ. ದಿ. 28-12-2010, 29-12-2010 ಮತ್ತು 30-12-2010ರಂದು ಟಾಂ ಟಾಂ ಮೂಲಕ ಸ್ಥಿರಾಸ್ತಿಯ ವಿಷಯವನ್ನು ಪ್ರಚುರ ಪಡಿಸಲಾಗಿರುತ್ತದೆ. ಆದರೂ ಸಹ ತೀರ್ಪುಋಣಿಗಳಾದ ಶ್ರೀ ಕುಮಾರ್ ಬಿನ್ ರಂಗಸ್ವಾಮಯ್ಯರವರು ತಮ್ಮ ಸುಸ್ತಿ ಸಾಲದ ಹಣವನ್ನು ಮರುಪಾವತಿಸಿರುವುದಿಲ್ಲವೆಂಬ ಅಂಶವನ್ನು ಈ ನ್ಯಾಯಾಲಯವು ಪರಿಶೀಲಿಸಿದೆ.

ಆದ ಕಾರಣ ಸಂಘದ ಮಾರಾಟಾಧಿಕಾರಿಗಳು ತೀರ್ಪುಋಣಿಗಳ ಸ್ಥಿರ ಸ್ವತ್ತನ್ನು ದಿ. 30-12-2010 ರಂದು ಬಹಿರಂಗ ಹರಾಜು ನಡೆಸಿದ್ದು, ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್‌ದಾರರಾದ ಶ್ರೀಮತಿ ಆರ್. ಆಶಾ ಕೋಂ ರಮೇಶ್ ತುಮಕೂರುರವರು ಸ್ಥಿರ ಸ್ವತ್ತನ್ನು ರೂ. 4,05,000-00ಗಳಿಗೆ ಬಹಿರಂಗ ಹರಾಜಿನಲ್ಲಿ ಮಾರಾಟ ಮಾಡಿ ಹರಾಜು ಸ್ಥಿರೀಕರಣಕ್ಕಾಗಿ ಈ ಕಛೇರಿಗೆ ಪ್ರಸ್ತಾವೆಯನ್ನು ಮಾರಾಟಾಧಿಕಾರಿಗಳುರವರು ದಿ. 02-02-2011ರಂದು ಸಲ್ಲಿಸಿರುತ್ತಾರೆ. ಸದರಿ ಸ್ವತ್ತು ಹರಾಜಾದ 30 ದಿವಸಗಳೊಳಗೆ, ಆಸ್ತಿಯ ಒಡೆತನವನ್ನು ಹೊಂದಿರುವ ಅಥವಾ ಆಸ್ತಿಯ ಹಿತಾಸಕ್ತಿ ಹೊಂದಿರುವ ವ್ಯಕ್ತಿಗಳಿಂದ ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ನಿಯಮ 38(4)(ಎ) ರೀತಿ ನಿಯಾಮಾನುಸಾರ ಠೇವಣಿ ಮಾಡಿ ಮಾರಾಟವನ್ನು ರದ್ದುಗೊಳಿಸುವಂತೆ ಕೋರಿ ಯಾವ ವಿಧವಾದ ಅರ್ಜಿಯು ಬಂದಿಲ್ಲದ ಪ್ರಯುಕ್ತ ಹಾಗೂ ಈ ಸಂಬಂಧ ಯಾವುದೇ ವಿಧವಾದ ಲಿಖಿತ ಆಕ್ಷೇಪಣೆಗಳು ಬಂದಿಲ್ಲವಾದ್ದರಿಂದ ಸದರಿ ಸ್ಥಿರಾಸ್ತಿಯನ್ನು ಅತ್ಯಧಿಕ ಹಾಗೂ ಅಂತಿಮ ಬಿಡ್‌ದಾರರ ಹೆಸರಿಗೆ ಸ್ಥಿರೀಕರಣಗೊಳಿಸಲು ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**-: ಆದೇಶ :-**

**ಸಂ. ಸನಿ-32/ಎ.ಬಿ.ಎನ್/ಸ್ಥಿರಾಸ್ತಿವರ್ಗಾವಣೆ/03/2010-11, ದಿನಾಂಕ: 18-04-2011**

ಶ್ರೀ ಗೋಪಾಲರೆಡ್ಡಿ, ಕೆ.ಸಿ.ಎಸ್. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು, ಆದ ನಾನು ಸರ್ಕಾರದ ಅಧಿಸೂಚನೆ ಸಂ. ಸಿಓ/201/ಸಿಎಲ್‌ಎಮ್/2008 ದಿನಾಂಕ 27-05-2010ರ ಪ್ರಕಾರ ಪ್ರತ್ಯಾಯೋಜಿಸಲ್ಪಟ್ಟ ಕರ್ನಾಟಕ ಸಹಕಾರ ಸಂಘಗಳ ನಿಯಮ 1960ರ ನಿಯಮ 38(6)ರ ಮೇರೆಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಕನಕ ಪತ್ತಿನ ಸಹಕಾರ ಸಂಘ ನಿ. ತುಮಕೂರು
ಇದಕ್ಕೆ ತೀರ್ಪುಋಣಿಗಳಾದ ಶ್ರೀ ಕುಮಾರ್ ಬಿನ್ ರಂಗಸ್ವಾಮಯ್ಯ ತುಮಕೂರು ಇವರ ಷೆಡ್ಯೂಲ್‌ನಲ್ಲಿ ವಿವರಿಸಲಾದ ಸ್ಥಿರಾಸ್ತಿಯನ್ನು ದಿ. 30-12-2010ರಂದು ನಡೆದ ಬಹಿರಂಗ ಹರಾಜಿನಲ್ಲಿ ಅತ್ಯಧಿಕ ಬಿಡ್‌ದಾರರಾದ ಶ್ರೀಮತಿ ಆರ್. ಆಶಾ ಕೋಂ ರಮೇಶ್ ತುಮಕೂರು ರವರ ಹೆಸರಿಗೆ ಸ್ಥಿರೀಕರಿಸಿ ಆದೇಶಿಸಿರುತ್ತೇನೆ.

ಬಹಿರಂಗ ಹರಾಜಿನಲ್ಲಿ ಶ್ರೀಮತಿ ಆರ್. ಆಶಾ ಕೋಂ ರಮೇಶ್ ತುಮಕೂರು ರವರು ಡಿಕ್ರಿ ಹೋಲ್ಡರ್ ಸಂಘಕ್ಕೆ ಪಾವತಿಸಿದ ರೂ. 4,05,000-00 ಗಳಲ್ಲಿ ಡಿಕ್ರಿ ಹೋಲ್ಡರ್ ಸಂಘಕ್ಕೆ ಮಾರಾಟದ ಘೋಷಣೆಯಲ್ಲಿ ಯಾವ ಮೊಬಲಗಿನ ವಸೂಲಿನ ಸಲುವಾಗಿ ಮಾರಾಟದ

ಆದೇಶ ಮಾಡಲ್ಪಟ್ಟಿತ್ತೋ, ಆ ಮೊಬಲಗನ್ನು ಮತ್ತು ಅದರ ಮೇಲಿನ ಬಡ್ಡಿ ಮತ್ತು ಜಪ್ತಿ ವೆಚ್ಚಗಳನ್ನು ತೀರ್ಪುಋಣಿ ಇವರ ಸಾಲದ ಖಾತೆಗೆ ಜಮಾ ತೆಗೆದುಕೊಂಡು ಲೆಕ್ಕಮಾಡಿಕೊಳ್ಳಲು ಡಿಕ್ರಿ ಹೋಲ್ಡರ್ ಸಂಘದ ಕಾರ್ಯದರ್ಶಿಯವರಿಗೆ ಆದೇಶಿಸಿದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ –04–2011 ರಂದು ನೀಡಿದೆ.

**ಕೆ. ಗೋಪಾಲರೆಡ್ಡಿ,**
ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

**ಸ್ಥಿರ ಸ್ವತ್ತುಗಳ ವಿವರ**

ತುಮಕೂರು ನಗರ ಹೊನ್ನೇನಹಳ್ಳಿ (ಪಂಚನಾಥರಾಯರಪಾಳ್ಯ) ಬಡಾವಣೆ ಮುನ್ಸಿಪಲ್ ಖಾತಾ ನಂ. 121/106ಬಿ/97ನೇ ನಂಬರಾಗಿ ಲಕ್ಷ್ಮಿದೇವಮ್ಮ ಕೋಂ ಚಿಕ್ಕವೆಂಕಟಪ್ಪನವರಿಂದ ಆದ ನನ್ನ ಹೆಸರಿಗೆ ಖಾತೆಯಾಗಿರುವ ಸ್ವತ್ತಿನ ಅಳತೆ: ಪೂರ್ವ–ಪಶ್ಚಿಮ : 60 ಅಡಿ, ಉತ್ತರ–ದಕ್ಷಿಣ : 90 ಅಡಿಗಳು ಉಳ್ಳದ್ದಕ್ಕೆ ಚಕ್ಕುಬಂದಿ : ಪೂರ್ವಕ್ಕೆ : ರಂಗಸ್ವಾಮಯ್ಯನ ಮನೆ, ಪಶ್ಚಿಮಕ್ಕೆ : ನಾರಾಯಣಪ್ಪನವರ ಮನೆ, ಉತ್ತರಕ್ಕೆ : ಕೃಷ್ಣಪ್ಪನವರ ಜಮೀನು, ದಕ್ಷಿಣಕ್ಕೆ : ರಸ್ತೆ ಈ ಮಧ್ಯೆ ಇರುವ ಸ್ವತ್ತು.

**ಕೆ. ಗೋಪಾಲರೆಡ್ಡಿ,**
ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ತುಮಕೂರು ಉಪವಿಭಾಗ, ತುಮಕೂರು.

**ಪಿ. ಆರ್. ನಂ. 471**

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಮಗಳೂರು–ಉಪವಿಭಾಗ, ಚಿಕ್ಕಮಗಳೂರು, ಇವರ ಕಾರ್ಯಾಲಯದಿಂದ.**

**ವಿಷಯ:–** ಶ್ರೀ ಜವರಯ್ಯ ಬಿನ್ ದೊಡ್ಡಯ್ಯ ಕರ್ಕಿಪೇಟೆ, ಚಿಕ್ಕಮಗಳೂರು ತಾಲ್ಲೂಕು, ಶ್ರೀಮತಿ ಜಯಮ್ಮ ಕೋಂ ಜವರಯ್ಯ, ಕರ್ಕಿಪೇಟೆ, ಚಿಕ್ಕಮಗಳೂರು ತಾಲ್ಲೂಕು ಇವರು ಜಂಟಿಯಾಗಿ ಪಡೆದ ಸಾಲಕ್ಕೆ ಶ್ರೀಮತಿ ಜಯಮ್ಮ ಕೋಂ ಜವರಯ್ಯ, ಕರ್ಕಿಪೇಟೆ, ಚಿಕ್ಕಮಗಳೂರು ತಾಲ್ಲೂಕು ಇವರ ಸ್ಥಿರಾಸ್ತಿಯನ್ನು ಬಹಿರಂಗ ಹರಾಜು ಮಾಡಿರುವುದನ್ನು, ಶ್ರೀಮತಿ ಮೈಮುನಾ ಕೋಂ ಕೆ.ಎಂ.ಅಬ್ದುಲ್ ಜಬ್ಬಾರ್, ಪಂಪಾನಗರ, ಚಿಕ್ಕಮಗಳೂರು, ರವರ ಹೆಸರಿಗೆ ಖಾಯಂಗೊಳಿಸಿ ದೃಡೀಕರಿಸಿ ಆದೇಶಿಸುವ ಬಗ್ಗೆ.

**ಉಲ್ಲೇಖ:–** ಶ್ರೀ ಸೋಮಸುಂದರ್,ಎಂ.ಎಸ್ ಮಾರಾಟಾಧಿಕಾರಿ ಹಾಗೂ ಮೇಲ್ವಿಚಾರಕರು ಪೀಕಾರ್ಡ್ ಬ್ಯಾಂಕ್ ನಿ, ಚಿಕ್ಕಮಗಳೂರು ಇವರ ಪತ್ರ ಸಂಖ್ಯೇ–ಪೀಕಾರ್ಡ್/ಚಿಮ/702/10–11, ದಿನಾಂಕಃ–31–03–2011.

**ಪ್ರಸ್ತಾವನೆಃ–**

ಶ್ರೀ ಜವರಯ್ಯ ಬಿನ್ ದೊಡ್ಡಯ್ಯ ಕರ್ಕಿಪೇಟೆ, ಚಿಕ್ಕಮಗಳೂರು ತಾಲ್ಲೂಕು ಮತ್ತು ಶ್ರೀಮತಿ ಜಯಮ್ಮ ಕೋಂ ಜವರಯ್ಯ, ಕರ್ಕಿಪೇಟೆ, ಚಿಕ್ಕಮಗಳೂರು ತಾಲ್ಲೂಕು ಇವರು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ದಿ ಬ್ಯಾಂಕ್ ನಿ, ಚಿಕ್ಕಮಗಳೂರು, ಇಲ್ಲಿ ಸಾಮಾನ್ಯ ಉದ್ದೇಶಕ್ಕಾಗಿ ಸಾಲ ಪಡೆದು ಮರು ಪಾವತಿ ಷರತ್ತಿನಂತೆ ಮರುಪಾವತಿ ಮಾಡದೇ ಸುಸ್ತಿಯಾಗಿದ್ದರ ಪ್ರಯುಕ್ತ ಸದರಿ ಬ್ಯಾಂಕಿನ ಕಾರ್ಯದರ್ಶಿ/ವ್ಯವಸ್ಥಾಪಕರು ಜವರಯ್ಯ ಬಿನ್ ದೊಡ್ಡಯ್ಯ ಇವರ ವಿರುದ್ದ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959, ಕಲಂ 70ಅನ್ವಯ ಕ್ರಮ ಕೈಗೊಂಡು, ಅವರ ವಿರುದ್ದ ದಾವಾ ಸಂಖ್ಯೇ–ಡಿಆರ್‌ಸಿ/ಡಿಡಿಎಸ್/410/1998–99ರನ್ವಯ ಡಿಕ್ರಿ ಪಡೆದಿರುತ್ತಾರೆ. ನಂತರ ಸದರಿ ಬ್ಯಾಂಕಿನ ಮಾರಾಟಾಧಿಕಾರಿಯವರು ಶ್ರೀ ಜವರಯ್ಯ ಬಿನ್ ದೊಡ್ಡಯ್ಯ ಇವರಿಗೆ ತಮ್ಮ ಬ್ಯಾಂಕಿಗೆ ಪಾವತಿಸಬೇಕಾದ ಸುಸ್ತಿ ಬಾಕಿ ಮೊಬಲಗನ್ನು ಪಾವತಿಸುವಂತೆ ನೋಟೀಸು ನೀಡಿದ್ದು, ಸದರಿ ಸುಸ್ತಿದಾರರು ಸುಸ್ತಿಬಾಕಿ ಹಣವನ್ನು ಬ್ಯಾಂಕಿಗೆ ಪಾವತಿಸಲು ವಿಫಲರಾಗಿರುತ್ತಾರೆ. ಸುಸ್ತಿದಾರರಾದ ಜವರಯ್ಯ ಬಿನ್ ದೊಡ್ಡಯ್ಯ ಮತ್ತು ಜಯಮ್ಮ ಕೋಂ ಜವರಯ್ಯ, ವಾಸಃ– ಕರ್ಕಿಪೇಟೆ, ಚಿಕ್ಕಮಗಳೂರು, ಇವರುಗಳು ತಮಗೆ ವಯಸ್ಸಾಗಿದ್ದು, ದುಡಿದು ತೀರಿಸಲು ಆಗುವುದಿಲ್ಲ, ಮತ್ತು ಹೆಣ್ಣು ಮಕ್ಕಳ ಮದುವೆಗೋಸ್ಕರ, ಬ್ಯಾಂಕಿಗೆ ಆಧಾರ ಮಾಡಿಕೊಟ್ಟಿರುವ ಸರ್ವೆ ನಂ.51,52ರಲ್ಲಿರುವ 5–00ಎಕರೆ ಜಮೀನನ್ನು ಬ್ಯಾಂಕಿನವರು ಮಾರಾಟ ಮಾಡಿ ಬ್ಯಾಂಕಿಗೆ ಬರಬೇಕಾದ ಹಣ ಮತ್ತು ಬಡ್ಡಿಯನ್ನು ಕಟ್ಟಿಸಿಕೊಂಡು ಉಳಿಕೆ ಹಣವನ್ನು ತಮಗೆ ಕೊಡಿಸಿಕೊಡಬೇಕೆಂದು, ಇದಕ್ಕೆ ತಮ್ಮ ಅಭ್ಯಂತರವೇನು ಇಲ್ಲವೆಂಬ ಸಾರಾಂಶವುಳ್ಳ ಒಪ್ಪಿಗೆ ಪತ್ರವನ್ನು ಬ್ಯಾಂಕಿಗೆ ಬರೆದು ಕೊಟ್ಟಿರುತ್ತಾರೆ ಆದ ಕಾರಣ ಮೇಲ್ಕಂಡ ಸುಸ್ತಿ ಬಾಕಿದಾರರು ಸುಸ್ತಿಹಣ ಮತ್ತು ಬಡ್ಡಿಯನ್ನು ಬ್ಯಾಂಕಿಗೆ ಜಮಾ ಮಾಡಲು ವಿಫಲರಾದ್ದರಿಂದ ಸುಸ್ತಿದಾರರಾದ ಶ್ರೀ ಜವರಯ್ಯ ಬಿನ್ ದೊಡ್ಡಯ್ಯ ಮತ್ತು ಶ್ರೀಮತಿ ಜಯಮ್ಮ ಕೋಂ ಜವರಯ್ಯ, ಕರ್ಕಿಪೇಟೆ, ಚಿಕ್ಕಮಗಳೂರು ತಾಲ್ಲೂಕು ಇವರು ಪೀಕಾರ್ಡ್ ಬ್ಯಾಂಕ್ ನಿ, ಚಿಕ್ಕಮಗಳೂರು ಇವರಿಂದ ಸಾಲವನ್ನು ಪಡೆಯುವಾಗ ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರಾಸ್ತಿಯ ಒಂದು ಭಾಗವಾದ ಶ್ರೀಮತಿ ಜಯಮ್ಮ ಕೋಂ ಜವರಯ್ಯ, ಕರ್ಕಿಪೇಟೆ, ಚಿಕ್ಕಮಗಳೂರು ತಾಲ್ಲೂಕು ಇವರ ಹೆಸರಿನಲ್ಲಿರುವ ಈ ಕೆಳಕಂಡ ಸ್ಥಿರಾಸ್ತಿ/ಜಮೀನನ್ನು ದಿನಾಂಕಃ–23–12–2010 ರಂದು ಬ್ಯಾಂಕಿನ ಮಾರಾಟಾಧಿಕಾರಿಯವರು ಬೀಕನಹಳ್ಳಿ ಗ್ರಾಮ ಪಂಚಾಯ್ತಿಯ ಚಿಕ್ಕಮಗಳೂರು ತಾಲ್ಲೂಕು ಇದರ ಆವರಣದಲ್ಲಿ ಸಂಜೆ 4–00ಗಂಟೆಗೆ ಬಹಿರಂಗ ಹರಾಜು ಮಾಡಿರುತ್ತಾರೆ.

ಆಸ್ತಿಯ/ಸ್ವತ್ತಿನ ವಿವರ

| ಗ್ರಾಮ | ಸ.ನಂ. | ತರಹೆ | ವಿಸ್ತೀರ್ಣ | ಆಕಾರ |
|---|---|---|---|---|
| ಹುಳಿಯಾರು ಹಳ್ಳಿ.<br>ಕಸಬಾ ಹೋಬಳಿ,<br>ಚಿಕ್ಕಮಗಳೂರು ತಾಲ್ಲೂಕು. | 36ಪಿ.<br>ಹೊಸ ನಂಬರ್,51 | ಖುಷ್ಕಿ | 2ಎಕರೆ,20ಗುಂಟೆ. | 4.76 |

ಶ್ರೀ ಜವರಯ್ಯ ಬಿನ್ ದೊಡ್ಡಯ್ಯ ಮತ್ತು ಶ್ರೀಮತಿ ಜಯಮ್ಮ ಕೋಂ ಜವರಯ್ಯ, ಕರ್ಕಿಪೇಟೆ, ಚಿಕ್ಕಮಗಳೂರು ತಾಲ್ಲೂಕು ಇವರಿಂದ ಅಸಲು, ಬಡ್ಡಿ, ಮುಂದುವರೆದ ಬಡ್ಡಿ ಮತ್ತು ಇತರೆ ಖರ್ಚುಗಳು ಸೇರಿ ದಿನಾಂಕಃ23–12–2010ಕ್ಕೆ ರೂ.59,560–00ಗಳು ಬ್ಯಾಂಕಿಗೆ ಬರಲು ಬಾಕಿ ಇರುತ್ತದೆ.

ದಿನಾಂಕಃ–23–12–2010 ರಂದು ಬೀಕನ ಹಳ್ಳಿ ಗ್ರಾಮ ಪಂಚಾಯ್ತಿ ಆವರಣ, ಚಿಕ್ಕಮಗಳೂರು ತಾಲ್ಲೂಕು ಇಲ್ಲಿ ಸಂಜೆ 4–00ಗಂಟೆಗೆ ನಡೆದ ಬಹಿರಂಗ ಹರಾಜಿನಲ್ಲಿ ಒಟ್ಟು 5 ಜನ ಬಿಡ್ಡುದಾರರು ಭಾಗವಹಿಸಿದ್ದು, ಶ್ರೀಮತಿ ಮೈಮುನ ಕೋ0 ಕೆ.ಎಂ.ಅಬ್ದುಲ್ ಜಬ್ಬಾರ್, ವಾಸಃ–ಪಂಪಾನಗರ, ಚಿಕ್ಕಮಗಳೂರು, ರವರು ರೂ.7,50,000–00 [ರೂಪಾಯಿಗಳು ಏಳು ಲಕ್ಷದ ಐವತ್ತು ಸಾವಿರಗಳು ಮಾತ್ರ]ಗಳಿಗೆ ಬಿಡ್ಡು ಮಾಡಿದ್ದು, ಅತೀ ಹೆಚ್ಚಿನ ಮೊಬಲಗನ್ನು ಬಿಡ್ಡು ಮಾಡಿದವರಾಗಿರುತ್ತಾರೆ. ಆದುದರಿಂದ ಬ್ಯಾಂಕಿನ ಮಾರಾಟಾಧಿಕಾರಿಯವರು ಶ್ರೀಮತಿ ಮೈಮುನ ಕೋಂ ಕೆ.ಎಂ.ಅಬ್ದುಲ್ ಜಬ್ಬಾರ್‌ರವರ ಹೆಸರಿಗೆ ಬಿಡ್ಡು ನಿಲ್ಲಿಸಿರುತ್ತಾರೆ. ಸದರಿ ಬಿಡ್ಡುದಾರರು ಹರಾಜು ದಿನಾಂಕದಂದು ಬಿಡ್ ಮೊಬಲಗಿನ ಪೈಕಿ ಶೇ 15ರಷ್ಟು ರೂ. 1,12,500–00ಗಳನ್ನು ಬ್ಯಾಂಕಿನ ಕ್ಯಾಂಪ್ ರಶೀದಿ ಸಂಖ್ಯೆ–7777ರಲ್ಲಿ ಜಮಾ ಮಾಡಿರುತ್ತಾರೆ.ಉಳಿದ ಮೊಬಲಗು ರೂ. 6,37,500ಗಳನ್ನು ದಿನಾಂಕ: 04–01–2011ರಂದು ರಶೀದಿ ಸಂಖ್ಯೆ: 7814ರಲ್ಲಿ ಬ್ಯಾಂಕಿಗೆ ಜಮಾ ಮಾಡಿರುತ್ತಾರೆ. ಬ್ಯಾಂಕಿನ ಮಾರಾಟಾಧಿಕಾರಿಯವರು ಸಹಕಾರ ಸಂಘಗಳ ಕಾಯ್ದೆ ರೀತ್ಯಾ ಬಹಿರಂಗ ಹರಾಜು ಮಾಡಿ ಕಡತವನ್ನು ಈ ಕಛೇರಿಗೆ ಉಲ್ಲೇಖದ ಪತ್ರದಲ್ಲಿ ಸಲ್ಲಿಸಿ, ಅತೀ ಹೆಚ್ಚಿನ ಮೊಬಲಗನ್ನು ಬಿಡ್ಡು ಮಾಡಿದ ಶ್ರೀಮತಿ ಮೈಮುನ ಕೋಂ ಕೆ.ಎಂ.ಅಬ್ದುಲ್ ಜಬ್ಬಾರ್, ವಾಸಃ–ಪಂಪಾನಗರ, ಚಿಕ್ಕಮಗಳೂರು, ಇವರ ಹೆಸರಿಗೆ ಹರಾಜು ಮಾಡಿದ ಸ್ಥಿರಾಸ್ತಿಯ ಹಕ್ಕನ್ನು ಖಾಯಂ ಮಾಡಿ ಆದೇಶ ಹೊರಡಿಸಬೇಕೆಂದು ಕೋರಿರುತ್ತಾರೆ. ಕಡತವನ್ನು ಪರಿಶೀಲಿಸಲಾಗಿ ಹರಾಜು ನಡವಳಿಕೆಯು ಕ್ರಮ ಬದ್ಧವಾಗಿರುವುದು, ಮನದಟ್ಟಾದ ಪ್ರಯುಕ್ತ ಈ ಕೆಳಕಂಡ ಆದೇಶ ನಿಡಲಾಗಿದೆ.

**–ಃಆದೇಶಃ–**

**ಸಂಖ್ಯೆಃ–ಎಆರ್–26/ಸಿ–5/ಡಿಎಕ್ಸ್‌ಎನ್/01/2011–12. ದಿನಾಂಕಃ–07–04–2011.**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ,1959 ರಡಿಯಲ್ಲಿ ಮತ್ತು ಕರ್ನಾಟಕ ಸಹಕಾರ ಸಂಘಗಳ ಕಾನೂನು,1960ರ ನಿಯಮ 38 ಮತ್ತು ಉಪನಿಯಮ 7ರಂತೆ ದತ್ತವಾಗಿರುವ ಅಧಿಕಾರವನ್ನು ಹೊಂದಿರುವ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಚಿಕ್ಕಮಗಳೂರು ಉಪವಿಭಾಗ, ಚಿಕ್ಕಮಗಳೂರು ಆದ ನಾನು ಪ್ರಾಥಮಿಕ ಸಹಕಾರ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ನಿ, ಚಿಕ್ಕಮಗಳೂರು, ಇದರಲ್ಲಿ ಸಾಲ ಪಡೆದು ಸುಸ್ತಿಬಾಕಿದಾರರಾದ ಶ್ರೀ ಜವರಯ್ಯ ಬಿನ್ ದೊಡ್ಡಯ್ಯ ಕರ್ಕಿಪೇಟೆ, ಚಿಕ್ಕಮಗಳೂರು ಮತ್ತು ಶ್ರೀಮತಿ ಜಯಮ್ಮ ಕೋಂ ಜವರಯ್ಯ, ಕರ್ಕಿಪೇಟೆ, ಚಿಕ್ಕಮಗಳೂರು ತಾಲ್ಲೂಕು ಇವರು ಸದರಿ ಬ್ಯಾಂಕಿನಿಂದ ಸಾಲ ಪಡೆಯುವಾಗ ಆಧಾರ ಮಾಡಿಕೊಟ್ಟ ಜಮೀನಿನಲ್ಲಿ ಪ್ರಸ್ತಾವನೆಯಲ್ಲಿ ವಿವರಿಸಲಾದ ಸ್ಥಿರಾಸ್ತಿಯ ಬಹಿರಂಗ ಹರಾಜಿನಲ್ಲಿ ಅತೀ ಹೆಚ್ಚಿನ ಮೊಬಲಗನ್ನು ಬಿಡ್ಡು ಮಾಡಿದ ಶ್ರೀಮತಿ ಮೈಮುನ ಕೋಂ ಕೆ.ಎಂ.ಅಬ್ದುಲ್ ಜಬ್ಬಾರ್‌ಯವರ ಹೆಸರಿಗೆ ಪ್ರಸ್ತಾವನೆಯಲ್ಲಿ ವಿವರಿಸಲಾದ ಸ್ಥಿರಾಸ್ತಿಯ ಹಕ್ಕನ್ನು ಖಾಯಂಗೊಳಿಸಿ ದೃಢೀಕರಿಸಿ ಆದೇಶ ಹೊರಡಿಸಿರುತ್ತೇನೆ. ಖಾಯಂಗೊಳಿಸಿದ ಸ್ಥಿರಾಸ್ತಿಯ ವಿವರವನ್ನು ನಮೂನೆ–10ರಲ್ಲಿ ನಮೂದಿಸಿ ಆದೇಶದೊಂದಿಗೆ ಲಗತ್ತಿಸಿದೆ.

ಈ ಆದೇಶವನ್ನು ಸ್ವಹಸ್ತದಿಂದ ಕಛೇರಿ ಮುದ್ರೆಯೊಡನೆ ಈ ದಿನ ದಿನಾಂಕ–07–04–2011ರಂದು ನೀಡಿದೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು,
ಚಿಕ್ಕಮಗಳೂರು ಉಪವಿಭಾಗ, ಚಿಕ್ಕಮಗಳೂರು.

**FORM No-10**

**Certificate of sale issued under sub rule [7] of rule 38 of the rules framed under the Karnataka Co-operative Societies Act of 1959.**

Name- H.V. Kumaraswamy, Assistant Registrar of Co-operative Societies, Chikkamagaluru-sub division , Chikkamagaluru.

**Excution Petition No -136/1999-2000.**

Manager, Primary Co-operative Agriculture and Rural development Bank Ltd, Chikkamagaluru.- Decree holder.

**-Verses-**

Shri Javaraiah s/o Doddaiah, karkipete, chikkamagaluru taluk and shrimati Jayamma W/o Javaraiah r/o karki pete, chikkamagaluru taluk-Defaulters.

This is to certify that Shrimati Mymuna W/o Shri K.M.Abdul jabbar, Religion Muslim,residing in the Pampanagar, Chikkamagaluru, has purchased at Huliyaru halli village, kasaba hobli , Chikkamagaluru Taluk and District. The under mentioned immovable property sold for arrears due to Primary Co-operative Agriculture and Rural development Bank Ltd, Chikkamagaluru by Shri Javaraiah s/o Doddaiah, Caste-Scheduled Caste, Religion- Hindu,Land Holder in the village karkipete, chikkamagaluru,and Shrimati Jayamma W/o Javaraiah, caste-Scheduled Caste, Religion- Hindu,Land Holder in the village karkipete, chikkamagaluru,in Execution of Decree

No.136/1999-2000 dated-11-03-1999, on the file of Assistant Registrar of Co-operative Societies Chikkamagaluru Sub-division, Chikkkamagaluru and has paid the full amount of purchase money viz., Rs.7,50,000-00 And that the sale has been duly confirmed by me on 7th day of April 2011.

Assistant Registrar Of Co-operative Societies,
Chikkamagaluru- sub division, Chikkamagaluru.

**Details of Stamp duty**

Rs.50,850-00, vide Pay Order No-38006, dated-07-04-2011 of Chikkamagalur District Co-operative Central Bank Ltd, Head Office Branch, Chikkamagalur,

**Schedule of properties**

Registration District- Chikkamagaluru.

Registration Sub- District- Chikkamagaluru.

Taluk- Chikkamagaluru.

Village- Huliyaruhalli.

**Description of properties-[boundaries]**

| Sy No | Village | Taluk | kind | Extent | Assesment |
|---|---|---|---|---|---|
| 36p[old] 51[New] | Huliyaruhalli. | Chikkamagaluru. | Dry land | 2 Acre 20 Guntas | 4.76 |

**East-**Land of Eraiah

**West-**Land of Rajaiah

**North-**Hill

**South-**Land of Marulasiddaiah

SURVEY No- 36 P[old],51[New]

Letter ------------

Name- Shrimati Jayamma W/o Javaraiah R/o karki pete, chikkamagaluru taluk,

Estimate extent –Acs 2, Guntas 20,

Assesment-Rs 4, NP 76.

Sale price for Whole lot-Rs 7,50,000-00 Only.

Date of sale-23-12-2010.

Given under my hand and seal this 7th day of April 2011.

Date-07-04-2011.

Station- Chikkamagaluru

Assistant Registrar Of Co-operative Societies,
Chikkamagaluru- sub division, Chikkamagaluru.

**P.R. No. 472**

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ.1, ಆಲಿ ಆಸ್ಕರ್ ರಸ್ತೆ, ಬೆಂಗಳೂರು–52.**

**ಸಂಖ್ಯೆ: ಸಸಂನಿ/ಸಮಾಪನೆ/54/2005–06, ದಿನಾಂಕ: 20–04–2011**

**ವಿಷಯ:–** ನಿಷ್ಕ್ರಿಯಗೊಂಡಿರುವ ವೆಸ್ಟರ್ನ್ ಹೆಂಚು ಉತ್ಪಾದಕರ ಖರೀದಿ ಮತ್ತು ಮಾರಾಟ ಸಹಕಾರ ಸಂಘ ನಿ., ಮಂಗಳೂರು ಈ ಸಂಘವನ್ನು ಸಮಾಪನೆಗೊಳಿಸುವ ಬಗ್ಗೆ.

**ಉಲ್ಲೇಖ:–**
1. ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ ಇವರ ಪತ್ರ ಸಂಖ್ಯೆ: ಜೆಆರ್ಎಂ/ಬಿ2/ಡಿಎಲ್ಎಸ್/37/05–06, ದಿನಾಂಕ: 24–6–2005.
2. ಸಹಕಾರ ಸಂಘಗಳ ಅಪರ ನಿಬಂಧಕರು, (ಕೈಗಾರಿಕೆ ಮತ್ತು ಇತರೆ) ಇವರ ನೋಟೀಸು ಸಂಖ್ಯೆ: ಆರ್‌ಸಿಎಸ್/ ಎಲ್‌ಕ್ಯೂಡಿ/54/05–06, ದಿನಾಂಕ: 10–8–2005.
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಂಗಳೂರು ಉಪ ವಿಭಾಗ ಇವರ ಪತ್ರ ಸಂಖ್ಯೆ: ಎಆರ್36/ಎಸ್8/17/ಎಲ್‌ಕ್ಯೂಡಿ/2003–04, ದಿನಾಂಕ: 6–12–2010.

**ಪ್ರಸ್ತಾವನೆ:**

ಸಹಕಾರ ಸಂಘಗಳ ಜಂಟಿ ನಿಬಂಧಕರು, ಮೈಸೂರು ಪ್ರಾಂತ ಇವರು ಉಲ್ಲೇಖ (1) ರ ಪತ್ರದ ಮೂಲಕ ಪ್ರಸ್ತಾವೆ ಸಲ್ಲಿಸಿ ನಿಷ್ಕ್ರಿಯಗೊಂಡಿರುವ ವೆಸ್ಟರ್ನ್ ಹೆಂಚು ಉತ್ಪಾದಕರ ಖರೀದಿ ಮತ್ತು ಮಾರಾಟ ಸಹಕಾರ ಸಂಘ ನಿ., ಮಂಗಳೂರು ಈ ಸಂಘವನ್ನು

ಸಮಾಪನೆಗೊಳಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಉಲ್ಲೇಖ (2) ರ ನೋಟೀಸಿನ ಮೂಲಕ ಸದರಿ ಸಂಘದ ಆಡಳಿತ ಸಮಿತಿಯವರಿಗೆ ಸೂಚನೆ ನೀಡಿ ಸಂಘವನ್ನು ಸಮಾಪನೆಗೊಳಿಸಲು ಆಕ್ಷೇಪಣೆಯೇನಾದರೂ ಇದ್ದಲ್ಲಿ 15 ದಿನಗಳೊಳಗಾಗಿ ಹೇಳಿಕೆ ಸಲ್ಲಿಸಲು ಅವಕಾಶ ನೀಡಲಾಗಿರುತ್ತದೆ. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಂಗಳೂರು ಉಪವಿಭಾಗ, ಇವರು ಉಲ್ಲೇಖ (3) ರ ಪತ್ರದ ಈ ಕಛೇರಿಯ ನೋಟೀಸನ್ನು ಜಾರಿಗೊಳಿಸಲು ನಿರ್ದೇಶಕರ ವಿಳಾಸಗಳು ಪತ್ತೆಯಾಗದೇ ಸಾಧ್ಯವಾಗಿಲ್ಲವೆಂದೂ, ಸಂಘವು ಸ್ಥಗಿತಾವಸ್ಥೆಗೊಂಡು ಈಗಾಗಲೇ 5 ವರ್ಷಗಳು ಕಳೆದಿರುವ ಹಿನ್ನಲೆಯಲ್ಲಿ ಸಂಘದ ಕಾರ್ಯಾಚರಣೆ ಬಗ್ಗೆ ಸದಸ್ಯರಿಗಾಗಲೀ, ಸಾರ್ವಜನಿಕರಿಗಾಗಲೀ ಆಸಕ್ತಿ ಇಲ್ಲವೆಂದು ಪರಿಗಣಿಸಿ ಸಂಘವನ್ನು ಕಲಂ 72 ರನ್ವಯ ಸಮಾಪನೆಗೊಳಪಡಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವೆಯನ್ನು ಪರಿಶೀಲಿಸಲಾಗಿ ಸಂಘವು ಜಿಲ್ಲಾಮಟ್ಟದ್ದಾಗಿದ್ದು, 1984 ನೇ ಸಾಲಿನಲ್ಲಿ ನೋಂದಣಿಯಾಗಿರುವುದು, 1994 ರಿಂದಲೂ ಯಾವುದೇ ಕಾರ್ಯವನ್ನು ನಿರ್ವಹಿಸದೇ ಸ್ಥಗಿತಗೊಂಡಿದ್ದು, ಸಂಘದ ಅಧ್ಯಕ್ಷರು ಹಾಗೂ ಸದಸ್ಯರು ದಿನಾಂಕ: 8–4–1999 ರ ಪತ್ರದ ಮೂಲಕ ಸಂಘವನ್ನು ಸಮಾಪನೆಗೊಳಿಸಲು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಂಗಳೂರು ಉಪ ವಿಭಾಗ, ಮಂಗಳೂರು ಇವರನ್ನು ಕೋರಿರುತ್ತಾರೆ. ಸದರಿ ಸಂಘವನ್ನು ಸಮಾಪನೆಗೊಳಿಸುವ ಕುರಿತು ದಿನಾಂಕ: 10–6–2005 ರ ಕನ್ನಡಪ್ರಭ ದಿನಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಲಾಗಿದ್ದು, ಸಮಾಪನಾ ಆದೇಶ ಹೊರಡಿಸುವ ಬಗ್ಗೆ ಆಕ್ಷೇಪಣೆ ಸಲ್ಲಿಸಲು ಕಾಲಾವಕಾಶ ನೀಡಲಾಗಿದ್ದರೂ ಯಾವುದೇ ಪ್ರತಿಕ್ರಿಯೆ ಬಂದಿರುವುದಿಲ್ಲವೆಂದೂ ಮತ್ತು ಆಡಳಿತ ಸಮಿತಿಯ ಸದಸ್ಯರ ವಿಳಾಸಗಳು ಪತ್ತೆಯಾಗದಿರುವುದು ಕಂಡುಬರುತ್ತದೆ.

ಈ ಸಂಘದ ಲೆಕ್ಕ ಪತ್ರಗಳನ್ನು 1993–94 ನೇ ಸಾಲಿನವರೆಗೆ ಆಡಿಟ್ ಮಾಡಿದ್ದು, 1994 ರಿಂದಲೂ ಯಾವುದೇ ಕಾರ್ಯವನ್ನು ನಿರ್ವಹಿಸದೆ ಸ್ಥಗಿತಗೊಂಡಿರುತ್ತದೆ. ಕಲಂ 72 (2), (ಬಿ) ಅನ್ವಯವಾಗುತ್ತದೆ. ಸಂಘವು ವ್ಯವಸ್ಥಾಪನೆಗೆ ಸಂಬಂಧಪಟ್ಟ ನಿಬಂಧನೆಗಳಾದ ವಾರ್ಷಿಕ ಮಹಾಸಭೆ ನಡೆಸುವುದು ಬೈಲಾದಲ್ಲಿ ತಿಳಿಸಲಾದ ಉದ್ದೇಶಗಳನ್ನು ಈಡೇರಿಸಲು ಕ್ರಮ ಕೈಗೊಳ್ಳುವುದು ಇತ್ಯಾದಿ ಸಕಾರ್ಯಗಳನ್ನು ಕೈಗೊಳ್ಳಲು ವಿಫಲವಾಗಿದ್ದು ಕಲಂ 72 (2) (ಸಿ) ಅನ್ವಯವಾಗುತ್ತದೆ. ಮೇಲಿನ ಪರಿಸ್ಥಿತಿಯಲ್ಲಿ ಈ ಸಂಘವನ್ನು ಕಲಂ 72 ರನ್ವಯ ಸಮಾಪನೆಗೊಳಿಸುವುದು ಅಗತ್ಯವೆಂದು ಅಭಿಪ್ರಾಯಪಟ್ಟು ಈ ಕೆಳಗಿನ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ವಯ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959 ರ ಕಲಂ 72(1) ಮತ್ತು (2) ರಡಿ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಒ/139/ಸಿಎಲ್ ಎಂ/2010, ದಿನಾಂಕ: 17–2–2011 ರ ಪ್ರಕಾರ ದತ್ತವಾದ ಅಧಿಕಾರವನ್ನು ಚಲಾಯಿಸಿ ಕೆ.ಹೆಚ್.ತಿಮ್ಮಯ್ಯ, ಸಹಕಾರ ಸಂಘಗಳ ಅಪರ ನಿಬಂಧಕರು (ಬ ಮತ್ತು ಮಾ) ಆದ ನಾನು ನಿಷ್ಕ್ರಿಯಗೊಂಡಿರುವ ವೆಸ್ಟರ್ನ್ ಹೆಂಚು ಉತ್ಪಾದಕರ ಖರೀದಿ ಮತ್ತು ಮಾರಾಟ ಸಹಕಾರ ಸಂಘ ನಿ., ಮಂಗಳೂರು ಈ ಸಂಘವನ್ನು ಸಮಾಪನೆಗೊಳಿಸಿ ಮಂಗಳೂರು ಉಪ ವಿಭಾಗದ ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿಯ ಮಾರಾಟಾಧಿಕಾರಿ–II ಇವರನ್ನು ಸಮಾಪಕರನ್ನಾಗಿ ನೇಮಿಸಿರುತ್ತೇನೆ. ಸಮಾಪಕರು ಕೂಡಲೇ ಪ್ರಭಾರ ವಹಿಸಿಕೊಂಡು ನಿಯಮಾನುಸಾರ ಸಮಾಪನಾ ಪ್ರಕ್ರಿಯೆ ಪೂರ್ಣಗೊಳಿಸಿ ಸಂಘದ ನೋಂದಣಿ ರದ್ಧತಿಗೆ ಪ್ರಸ್ತಾವೆಯನ್ನು 90 ದಿನಗಳೊಳಗೆ ಸಲ್ಲಿಸುವಂತೆ ಸೂಚಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಕಛೇರಿ ಮೊಹರಿನೊಂದಿಗೆ 20–4–2011 ರಂದು ಹೊರಡಿಸಲಾಗಿದೆ.

**ಕೆ.ಹೆಚ್.ತಿಮ್ಮಯ್ಯ,**
ಸಹಕಾರ ಸಂಘಗಳ ಅಪರ ನಿಬಂಧಕರು
(ಬಳಕೆ ಮತ್ತು ಮಾರಾಟ)

**ಪಿ.ಆರ್. ನಂ. 478**

## ಸಹಕಾರ ಇಲಾಖೆ

## ಸಹಕಾರ ಸಂಘಗಳ ಅಪರ ನಿಬಂಧಕರು (ಗೃಹ ಮತ್ತು ಇತರೆ) ಬೆಂಗಳೂರು ಇವರ ನ್ಯಾಯಾಲಯ ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ. 01, ಆಲಿ ಆಸ್ಕರ್ ರಸ್ತೆ ಬೆಂಗಳೂರು–52

**ದಾವಾ ಸಂಖ್ಯೆ:ಎ(ಹೆಚ್ ಮತ್ತು ಎಂ):ಡಿಐಎಸ್:ಡಿ2:183:2010–11**

| ವಾದಿ | ಪ್ರತಿವಾದಿ |
|---|---|
| ಕಾರ್ಯದರ್ಶಿ<br>ಜನರಲ್ ಇನ್ಸೂರೆನ್ಸ್ ಎಂಪ್ಲಾಯೀಸ್<br>ಕೋ–ಆಪರೇಟಿವ್ ಕ್ರೆಡಿಟ್ ಸೊಸೈಟಿ ಲಿ., "ಕೃಷ್ಣಾ"<br>ಅಜ್ಜರ ಕಾಡು, ಉಡುಪಿ | ಶ್ರೀ ಭಾಸ್ಕರ್ ರಾವ್ ಕಿದಿಯೂರ್, ಬಿನ್ ಲೇಟ್ ಶಂಕರ್‌ರಾವ್ ಕಿದಿಯೂರ್,<br>ಮಾನಸ ಅಪಾರ್ಟ್‌ಮೆಂಟ್, ಓಲ್ಡ್ ಪೋಸ್ಟ್ ಆಫೀಸ್ ರಸ್ತೆ,<br>ಉಡುಪಿ–01 |

**–: ಪರತ್ತಿಗೊಳಪಟ್ಟ ತೀರ್ಪು ಜಪ್ತು ಆದೇಶದ ನೋಟೀಸು :–**

ವಾದಿಯು ಈ ದಾವೆಯನ್ನು ಪ್ರತಿವಾದಿಯ ವಿರುದ್ಧ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70ರಡಿ ದಾಖಲಿಸಿ ದಿನಾಂಕ : 22–03–2011ಕ್ಕೆ ಪ್ರತಿವಾದಿಯಿಂದ ವಾದಿಗೆ ರೂ. 7,17,698–00 ರೂ.ಗಳು ವಸೂಲಾಗಬೇಕೆಂದು ಕೋರಿ ಈ ಬಗ್ಗೆ ಡಿಕ್ರಿ ನೀಡಲು ಕೋರಿರುತ್ತಾರೆ.

ದಿನಾಂಕ: 24–03–2011ರಂದು ಪ್ರಕರಣವನ್ನು ವಿಚಾರಣೆಗೆ ತೆಗೆದುಕೊಂಡಿದ್ದು, ವಾದಿ ಹಾಜರಾಗಿ ತಮ್ಮ ಪರ ವಕೀಲರನ್ನು ನೇಮಿಸಿಕೊಳ್ಳಲು ನಿಯಮ 55 ರಡಿ ಅರ್ಜಿ ಸಲ್ಲಿಸಿರುತ್ತಾರೆ. ಅದನ್ನು ಒಪ್ಪಲಾಗಿದೆ. ವಾದಿಪರ ಶ್ರೀ ಮಹೇಶ್ ಆರ್ ಉಪ್ಪಿನ್ ವಕೀಲರು ವಕಾಲತ್ತು ಸಲ್ಲಿಸಿರುತ್ತಾರೆ. ವಾದಿಯು ಸಹಕಾರ ಸಂಘಗಳ ಕಾಯ್ದೆ ಕಲಂ 103ರಡಿ ತೀರ್ಪು ಪೂರ್ವ ಜಪ್ತು ಆದೇಶ ಹೊರಡಿಸಲು ಅರ್ಜಿ ಸಲ್ಲಿಸಿರುತ್ತಾರೆ.

ಈ ದಿನ ಪ್ರಕರಣದ ವಿಚಾರಣೆ ನಡೆಸಿದ್ದು, ವಾದಿಯ ಪರ ವಕೀಲರು ಕಲಂ 103ರ ಅರ್ಜಿಯ ಬಗ್ಗೆ ತಮ್ಮ ವಾದ ಮಂಡಿಸಿರುತ್ತಾರೆ. ಅದನ್ನು ಆಲಿಸಲಾಗಿದೆ, ವಾದಿ ಸಲ್ಲಿಸಿರುವ ಅರ್ಜಿಯಲ್ಲಿ ಹಾಗೂ ಅವರ ಪರ ವಕೀಲರು ಮಂಡಿಸಿರುವ ವಾದದಲ್ಲಿ ವಾದಿಯು ಪ್ರತಿವಾದಿಯ ಕಟ್ಟಡದಲ್ಲಿ ಬಾಡಿಗೆಗೆ ಇದ್ದು, ಅದಕ್ಕಾಗಿ ಠೇವಣಿ ಹಣ ರೂ. 9.80 ಲಕ್ಷ ದಿನಾಂಕ : 31–12–2005 ಹಾಗೂ ವಿದ್ಯುತ್ ಇಲಾಖೆಗೆ ರೂ. 10,154/–ನ್ನು ದಿನಾಂಕ : 02–02–2006ರಲ್ಲಿ ಪಾವತಿಸಿರುವುದಾಗಿ ಹೇಳಿರುತ್ತಾರೆ. ವಾದಿಯು ತನ್ನ ಕಛೇರಿಯನ್ನು ಸ್ವಂತ ಕಟ್ಟಡಕ್ಕೆ ದಿನಾಂಕ : 19–04–2010ರಂದು ವರ್ಗಾಯಿಸುವುದಾಗಿ ದಿನಾಂಕ : 10–04–2010ರಂದು ಪ್ರತಿವಾದಿಗೆ ಪತ್ರ ನೀಡಿದ್ದು, ತದನಂತರ ರೂ. 9.80 ಲಕ್ಷ ಹಾಗೂ 10,154/– ರೂಗಳನ್ನು ಹಿಂತಿರುಗಿಸಲು ಪ್ರತಿವಾದಿಯನ್ನು ಕೋರಿದ್ದು, ಪ್ರತಿವಾದಿಯು ಪೂರ್ತಿ ಹಣವನ್ನು ಹಿಂತಿರುಗಿಸದ ಕಾರಣ ಪ್ರತಿವಾದಿಯಿಂದ ವಸೂಲಾಗಲು ಬಾಕಿ ಇರುವ ಹಣಕ್ಕೆ ಈ ನ್ಯಾಯಾಲಯದಲ್ಲಿ ದಾವೆ ಹೂಡಿರುವುದಾಗಿ ಹೇಳಿರುತ್ತಾರೆ. ಪ್ರತಿವಾದಿಯು ಉಡುಪಿಯಲ್ಲಿನ ಬ್ಯಾಂಕುಗಳಲ್ಲಿ ಸಾಲ ಪಡೆದಿದ್ದು, ವಾದಿಯಿಂದ ಪಡೆದಿರುವ ಬಾಡಿಗೆ ಕಟ್ಟಡಕ್ಕೆ ಠೇವಣಿ ವಸೂಲಾಗಲು ವಿಳಂಬವಾಗಲು ಹಾಗೂ ಈ ಬಗ್ಗೆ ಡಿಕ್ರಿ ನೀಡಿದರೂ ಅದು ಜಾರಿಯಾಗದಂತೆ ನೋಡಿಕೊಳ್ಳಲು ತನ್ನ ಷೆಡ್ಯೂಲ್ ಸ್ವತ್ತನ್ನು 3ನೇ ವ್ಯಕ್ತಿಗಳಿಗೆ ವಿಲೇ ಮಾಡಲು ಹವಣಿಸುತ್ತಿದ್ದಾರೆಂದು ಹೇಳಿ ಇದರಿಂದ ವಾದಿಗೆ ದಾವೆ ಹಣ ವಸೂಲಿ ಮಾಡಲು ರಹಾ ಇಲ್ಲದಂತಾಗುವುದೆಂದು ಹೇಳಿರುತ್ತಾರೆ. ಆದಕಾರಣ ಷೆಡ್ಯೂಲ್ ಸ್ವತ್ತನ್ನು ಷರತ್ತಿಗೊಳಪಟ್ಟು ಜಪ್ತಿ ಆದೇಶ ಹೊರಡಿಸುವುದು ಅತ್ಯಂತ ಅಗತ್ಯವೆಂದು ಹೇಳಿ ಈ ಬಗ್ಗೆ ಷೆಡ್ಯೂಲ್ ಸ್ವತ್ತಿನ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುತ್ತಾರೆ.

ವಾದಿಯು ಕಲಂ 103ರಡಿ ಸಲ್ಲಿಸಿರುವ ಅರ್ಜಿ ಹಾಗೂ ಸಲ್ಲಿಸಿರುವ ದಾಖಲೆಗಳು ಹಾಗೂ ವಕೀಲರ ವಾದ ಇವುಗಳನ್ನು ಪರಿಶೀಲಿಸಿ ವಾದಿಯ ಅರ್ಜಿ ಪುರಸ್ಕರಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ವಾದಿಯು ಕಲಂ 103ರಡಿ ಸಲ್ಲಿಸಿರುವ ಅರ್ಜಿಯನ್ನು ಪುರಸ್ಕರಿಸಿದೆ. ಪ್ರತಿವಾದಿಯ ಈ ಕೆಳಕಂಡ ಷೆಡ್ಯೂಲ್ ಸ್ವತ್ತನ್ನು ಯಾರಿಗೂ ಪರಭಾರೆ ಮಾಡದಂತೆ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103ರಡಿ ಷರತ್ತಿಗೊಳಪಟ್ಟು ಜಪ್ತಿ ಮಾಡಲಾಗಿದೆ. ಈ ಷರತ್ತುಗಳಿಗೊಳಪಟ್ಟ ಜಪ್ತಿ ಆದೇಶವನ್ನು ತೆರವುಗೊಳಿಸಲು ಪ್ರತಿವಾದಿಯು ಇಚ್ಛಿಸಿದ್ದಲ್ಲಿ ರೂ. 7,17,698/–ಗಳನ್ನು ವಾದಿ ಸಂಸ್ಥೆಯಲ್ಲಾಗಲೀ ಅಥವಾ ಮಂಗಳೂರು ಮತ್ತು ಉಡುಪಿ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್. ಉಡುಪಿ ಶಾಖೆಯಲ್ಲಾಗಲೀ ವಾದಿಯ ಹೆಸರಿನಲ್ಲಿ ಠೇವಣಿ ಮಾಡಿ ಠೇವಣಿ ಮಾಡಿದ ಬಗ್ಗೆ ದಾಖಲೆಗಳನ್ನು ದಿನಾಂಕ : 25–04–2011 ರೊಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಸೂಚಿಸಿದೆ. ತಪ್ಪಿದ್ದಲ್ಲಿ ಈ ಆದೇಶವನ್ನು ಸ್ಥಿರೀಕರಿಸಲಾಗುವುದು.

**–: ಷೆಡ್ಯೂಲ್ ಸ್ವತ್ತು :–**

ಉಡುಪಿ ಜಿಲ್ಲೆ ಉಡುಪಿ ಟೌನ್ ಮೂಡನಿಡಂಬೂರ್ ಗ್ರಾಮದ ಭೂಪರಿವರ್ತನೆಯಾಗಿರುವ ಸರ್ವೆ ನಂ. 131–16 ಎಪಿ 1 ರಲ್ಲಿ 6 ಸೆಂಟ್ಸು, ಸರ್ವೆ ನಂ. 131–16 ಎಫ್ 2ರಲ್ಲಿ 20 ಸೆಂಟ್ಸು ಹಾಗೂ ಸರ್ವೆ ನಂ. 131–16ಬಿ ರಲ್ಲಿ 20 ಸೆಂಟ್ಸು ಜಮೀನು ಹಾಗೂ ಸದರಿ ಜಾಗದಲ್ಲಿ ಪ್ರತಿವಾದಿಯ ಒಡೆತನದಲ್ಲಿರುವ 6741 ಚದರ ಅಡಿ ವಿಸ್ತೀರ್ಣದ 2 ಅಂತಸ್ತಿನ ಸಿತಾರಾ ಕಾಂಪ್ಲೆಕ್ಸ್ ಕಟ್ಟಡ ಇದಕ್ಕೆ ಚಕ್ಕುಬಂದಿ ಉತ್ತರಕ್ಕೆ ಇದೇ ಸರ್ವೆ ನಂಬರಿನ ಜಮೀನು, ಪೂರ್ವಕ್ಕೆ ಖಾಸಗಿ ಸ್ವತ್ತು, ದಕ್ಷಿಣಕ್ಕೆ ರಸ್ತೆ, ಪಶ್ಚಿಮಕ್ಕೆ ಖಾಸಗಿಸ್ವತ್ತು. ಈ ಮೇರೆಗೆ ಇರುವ ಎಲ್ಲಾ ಜಮೀನು ಸುಮಾರು ರೂ. 1,72,32,000–00ಗಳ ಮಾರುಕಟ್ಟೆ ಬೆಲೆಯ ಪ್ರತಿವಾದಿಗೆ ಸೇರಿದ ಸ್ವತ್ತು, ಷರತ್ತಿಗೊಳಪಟ್ಟ ತೀರ್ಪು ಪೂರ್ವ ಜಪ್ತು ಆದೇಶವನ್ನು ಈ ದಿನ ದಿನಾಂಕ : 29–03–2011ರಂದು ಮುಕ್ತ ನ್ಯಾಯಾಲಯದಲ್ಲಿ ಉಚ್ಚರಿಸಿದೆ.

**ಬಿ. ಹೆಚ್. ಮಂಜಪ್ಪ,**
ಸಹಕಾರ ಸಂಘಗಳ ಅಪರ ನಿಬಂಧಕರು
(ಗೃಹ ಮತ್ತು ಇತರೆ)

**ಪಿ.ಆರ್. ನಂ. 479**

**ಭಾಷಾಂತರ ನಿರ್ದೇಶನಾಲಯ**

**ಪೋಡಿಯಂ ಬ್ಲಾಕ್, ನೆಲಮಹಡಿ, ವಿಶ್ವೇಶ್ವರಯ್ಯ ಕೇಂದ್ರ, ಡಾ॥ ಬಿ. ಆರ್. ಅಂಬೇಡ್ಕರ್ ರಸ್ತೆ, ಬೆಂಗಳೂರು–1**

**ಅಧಿಕೃತ ಜ್ಞಾಪನ**

**ಸಂ. ಭಾನಿ 13/ಆಡಳಿತ/ಮುಂಬಡ್ತಿ/2011, ದಿನಾಂಕ : 20–04–2011**

ಭಾಷಾಂತರ ನಿರ್ದೇಶನಾಲಯದ ಈ ಕೆಳಕಂಡ ಭಾಷಾಂತರಕಾರರ ವೃಂದದ ಅಧಿಕಾರಿಯವರಿಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವೇತನ ಶ್ರೇಣಿ ರೂ. 11400–21600ರ ಸಂಶೋಧನಾಧಿಕಾರಿ ಹುದ್ದೆಗೆ ಸ್ಥಾನಪನ್ನ ಬಡ್ತಿ ನೀಡಿ ಅವರ ಹೆಸರಿನ ಮುಂದೆ ನಮೂದಿಸಿರುವ ಹುದ್ದೆಯಲ್ಲಿ ಸ್ಥಳ ನಿಯುಕ್ತಿಗೊಳಿಸಲಾಗಿದೆ.

| ಕ್ರ. ಸಂ. | ಅಧಿಕಾರಿ ಹೆಸರು ಮತ್ತು ಪ್ರಸ್ತುತ ಹುದ್ದೆ | ಬಡ್ತಿ ನೀಡಿ ನೇಮಿಸಲಾದ ಹುದ್ದೆ |
|---|---|---|
| 1. | ಶ್ರೀಮತಿ ಡಿ. ಸ್ಮಿತಾ, ಭಾಷಾಂತರಕಾರರು (ಕನ್ನಡ) ಭಾಷಾಂತರ ನಿರ್ದೇಶನಾಲಯ | ಶ್ರೀ ಜಿ. ಗಂಗರಾಜು, ಸಂಶೋಧನಾಧಿಕಾರಿ ಇವರ ನಿಯೋಜನೆಯಿಂದ, ಭಾಷಾಂತರ ನಿರ್ದೇಶನಾಲಯದಲ್ಲಿ ತೆರವಾದ ಹುದ್ದೆ. |

**ಡಾ|| ಕೆ. ಎಸ್. ಗೀತಾ,**
ನಿರ್ದೇಶಕರು.

**ಪಿ.ಆರ್. ನಂ. 480**

**DEPARTMENT OF COMMERCIAL TAXES**

**PROCEEDINGS OF THE ASSISTANT COMMISSIONER OF COMMERCIAL TAXES,**

**L.V.O-110(ADDITIONAL), BANGALORE**

**Present :** H.V. Sujatha

**SUB :** Loss of F Form in case of M/s Head Synthetics, Bangalore

**READ:** Letter Dated: 31-03-2011 of M/s Heda Synthetics

**PREAMBLE:**

M/s Heda Synthetics, No.131/A, 6th Main, 6th Cross, Sampangiram Nagar, Bangalore, is a registered dealer borne on the files of this office bearing TIN 29600068164. The company in its letter cited above has intimated that F Form bearing NO.KA-F/01-0217958 issued by the department is lost in transit.

The company has produced proof for having filed the complaint to Police Authorities regarding loss of above ‘F’ form and executed Indemnity Bond in favour of the Government as laid down under Rule 12(2) and 12(9) of CST Act 1956.

Since the F Form No.KA-F/01-217958 stated to be lost in transit is treated as invalid. Hence this order.

**ORDER NO.ACCT/LVO-110(A)/2011-12 DATED:27/04-2011**

In view of the circumstances explained above, the F Form bearing NO.KA-F/01-0217958 is treated as invalid with immediate effect.

Asst. Commissioner of Commercial Taxes
L.V.O-110 (Additional) Bangalore

**OFFICE OF THE ASST. COMMISSIONER OF COMMERCIAL TAXES, LOCAL VAT OFFICE – 110 (ADDITIONAL), BANGALORE**

Notified Authority under Rule 6(i) of the CST (Karnataka) Rules 1957

**NOTIFICATION**

**NO.ACCT/LVO-110(A)/2011-12, DATED 27/04/2011**

By virtue of the provisions of Rule 12(2) of the CST (Registration & Turnover) Rules 1957 and Rule 6(e) and 6(i) of the CST (Karnataka) Rules 1957, it is hereby notified for general information that the declaration in Form-F described below is declared to be obsolete and invalid.

| Sl. No. | Number (including code No) of declaration Forms Lost, destroyed or Stolen | Name & address of the dealer to whom declaration Forms/is/are issued by the department with date of F form issue | Registration Certificate No. of the dealer under CST Act 1956 TIN NO | The address of the dealer to whom the declaration is/are sent | Date of issue of Form/s by the dealer | Whether lost/ stolen/ destroyed | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | |
| 1 | F Form Sl.No. KA-F/01-217958 | M/s Heda Synthetics, No.131/A, 6th Main, 6th Cross, S.R. Nagar, Bangalore-560027. | 29600068184 | M/s L.N. Polysters Ltd, Vapi, Gujarat | 24/12/08 | Lost in transit | - |

**H.V. SUJATHA,**
Asst. Commissioner of Commercial Taxes
L.V.O-110 (Additional) Bangalore

**P.R. 530**

**DEPARTMENT OF COMMERCIAL TAXES**

**PROCEEDINGS OF THE ASSISTANT COMMISSIONER OF COMMERCIAL TAXES, L.V.O-110(ADDITIONAL), BANGALORE**

**Present:** H.V. Sujatha

**SUB :-** Loss of Form C in case of M/s Nippon Auto Electricals, Bangalore.

**READ:** Letter Dated: 03-02-2011 of the dealer

**PREAMBLE:**

M/s Nippon Auto Electricals, Savitha Samaj Trust Building, No.21, Journalist Colony, Bangalore-560 002, is a registered dealer borne on the files of this office bearing TIN 29020144725. The Company in its letter cited above has intimated that Form C bearing NO.KA-C/01 -0938120 issued by the department has lost at their suppliers end i.e, M/s Denso India Limited, B-1/ D-4, Ground Floor, Mohan Co-operative Industrial Estate, Mathura Road, Badarpur, New Delhi – 110014 with TIN 07600153596.

The company has produced proof for having filed the complaint to Police Authorities regarding loss of above Form C and executed Indemnity Bond in favour of the Government as laid down under Rule 12(2) and 12(9) of CST Act 1956.

Since the Form C No.KA/C/01-0938120 stated to be lost at their suppliers end is treated as invalid, hence this order.

**ORDR NO.ACCT/LVO-110(A)/2011-12, DATED;12/05/2011**

In view of the circumstances explained above, the Form C bearing No. KA-C/01 0938120 is treated as invalid with immediate effect.

**H.V. SUJATHA,**
Asst. Commissioner of Commercial Taxes
L.V.O-110 (Additional) Bangalore

**DEPARTMENT OF COMMERCIAL TAXES**

**OFFICE OF THE ASST. COMMISSIONER OF COMMERCIAL TAXES, LOCAL VAT OFFICE – 110 (ADDITIONAL), BANGALORE**

Notified Authority under Rule 6(i) of the CST (Karnataka) Rules 1957

**NOTIFICATION**

**NO.ACCT/LVO-110(A)/2011-12, DATED 12/05/2011**

By virtue of the provisions of Rule 12(2) of the CST (Registration & Turnover) Rules 1957 and Rule 6(e) and 6(i) of the CST (Karnataka) Rules 1957, it is hereby notified for general information that the declaration in Form-C described below is declared to be obsolete and invalid.

| Sl. No. | Number (including code No) of declaration Forms Lost, destroyed or Stolen | Name & address of the dealer to whom declaration Forms/is/are issued by the department with date of F form issue | Registration Certificate No. of the dealer under CST Act 1956 TIN NO | The address of the dealer to whom the declaration is/are sent | Date of issue of Form/s by the dealer | Whether lost/ stolen/ destroyed | Remarks |
|---|---|---|---|---|---|---|---|
| 1 | 2 | 3 | 4 | 5 | 6 | 7 | |
| 1 | **Form C** Sl.No. KA-C/01-0938120 | M/s Nippon Auto Electricals, Savitha Samaj Trust Bldg. No.21, Journalist Colony, Bangalore-27. | 29020144725 | M/s Denso India Ltd, B-1/D-4, Ground Floor, Mohan Co-op Industrial Estate, Badarpur, New Delhi-110014 | 17/03/2009 | Lost at the suppliers end | Rs. 11,69,458 |

**H.V. SUJATHA,**
Asst. Commissioner of Commercial Taxes
L.V.O-110 (Additional) Bangalore

**P.R. 531**

## ಔಷಧ ನಿಯಂತ್ರಣ ಇಲಾಖೆ

**ಕರ್ನಾಟಕ ರಾಜ್ಯದ ಔಷಧ ನಿಯಂತ್ರಕರ ಕಚೇರಿ, ಅರಮನೆ ರಸ್ತೆ, ಬೆಂಗಳೂರು–560 001.**

**ಅಧಿಕೃತ ಜ್ಞಾಪನ ಸಂಖ್ಯೆ:ಔನಿಇ/22/ಸಿಬ್ಬಂದಿ/2011–12, ದಿನಾಂಕ:19–04–2011**

**ವಿಷಯ:** ನಿಯೋಜನೆ ಮೇರೆಗೆ ಎಂ.ಫಾರ್ಮ ವ್ಯಾಸಂಗ ಪೂರ್ಣಗೊಳಿಸಿರುವ ಜೂನಿಯರ್ ಸೈಂಟಿಫಿಕ್ ಆಫೀಸರ್‌ಗಳ ಸ್ಥಳನಿಯುಕ್ತಿ ಕುರಿತು

**ಉಲ್ಲೇಖ:** (1) ಸರ್ಕಾರದ ಆದೇಶ ಸಂಖ್ಯೆ:ಆಕುಕ/78/ಐಎಂಎಂ/2009, ದಿನಾಂಕ:20–06–2009.

(2) ಪ್ರಾಂಶುಪಾಲರು, ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ ಇವರ ಪತ್ರ ಸಂಖ್ಯೆ: ಔನಿಇ/ಸಔವಿಮವಿ/03/ವಿವಿ–3/2010–11, ದಿನಾಂಕ:18–04–2011.

ಉಲ್ಲೇಖ (1)ರ ಸರ್ಕಾರದ ಅಧಿಸೂಚನೆಯನ್ವಯ, 2009–10 ಮತ್ತು 2010–11ನೇ ಸಾಲಿನ ಶೈಕ್ಷಣಿಕ ವರ್ಷಗಳಲ್ಲಿ ಎಂ.ಫಾರ್ಮ ವ್ಯಾಸಂಗಕ್ಕೆ ಸೇವಾನಿರತ ಅಭ್ಯರ್ಥಿಗಳಾಗಿ ನಿಯೋಜಿತರಾಗಿದ್ದು, ಸ್ನಾತಕೋತ್ತರ ವ್ಯಾಸಂಗವನ್ನು ಮುಗಿಸಿರುವುದರಿಂದ, ಪ್ರಾಂಶುಪಾಲರು, ಸರ್ಕಾರಿ ಔಷಧ ವಿಜ್ಞಾನ ಮಹಾವಿದ್ಯಾಲಯ, ಬೆಂಗಳೂರು ಇವರು ಉಲ್ಲೇಖ (2)ರನ್ವಯ ಬಿಡುಗಡೆಗೊಳಿಸಿರುವ ಕೆಳಕಂಡ ಅಧಿಕಾರಿಗಳನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಕಛೇರಿಯಲ್ಲಿ ಖಾಲಿ ಇರುವ ಜೂನಿಯರ್ ಸೈಂಟಿಫಿಕ್ ಆಫೀಸರ್ ಹುದ್ದೆಗಳಿಗೆ ಸ್ಥಳನಿಯುಕ್ತಿಗೊಳಿಸಿ ನೇಮಕ ಮಾಡಲಾಗಿದೆ.

| ಕ್ರ.ಸಂ. | ಅಧಿಕಾರಿಯ ಹೆಸರು ಶ್ರೀ / ಶ್ರೀಮತಿ | ಸ್ಥಳ ನಿಯುಕ್ತಿಗೊಳಿಸಲಾದ ಕಛೇರಿ |
|---|---|---|
| 1 | ಎನ್. ಮುರಳೀಧರ್,<br>ಜೂನಿಯರ್ ಸೈಂಟಿಫಿಕ್ ಆಫೀಸರ್ | ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು |
| 2 | ಎಸ್. ಕಿರಣ್,<br>ಜೂನಿಯರ್ ಸೈಂಟಿಫಿಕ್ ಆಫೀಸರ್ | ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು |

ಸದರಿ ಅಧಿಕಾರಿಗಳು ಉಲ್ಲೇಖ (2)ರ ಜ್ಞಾಪನದಲ್ಲಿ ತಿಳಿಸಿರುವಂತೆ, ಎಂ.ಫಾರ್ಮ ಭಾಗ–2ರ ಮೌಖಿಕ ಪರೀಕ್ಷೆಗಳಿರುವ ದಿನಾಂಕಗಳಂದು ಮೇಲಾಧಿಕಾರಿಗಳ ಅನುಮತಿಯೊಂದಿಗೆ ವೈಯಕ್ತಿಕ ರಜೆಯನ್ನು ಬಳಸಿಕೊಂಡು ಪರೀಕ್ಷೆಗೆ ಹಾಜರಾಗತಕ್ಕದ್ದು.

**ಡಾ|| ಬಿ.ಆರ್. ಜಗಶೆಟ್ಟಿ,**
ಔಷಧ ನಿಯಂತ್ರಕರು
ಕರ್ನಾಟಕ ರಾಜ್ಯ

**ಪಿ.ಆರ್.532**

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ಇವರ ನಡವಳಿ

**ವಿಷಯ: ರಾಮನಗರ** ಜಿಲ್ಲೆ, **ಕನಕಪುರ** ತಾಲ್ಲೂಕು, **ಕೋಟಿಕೊಪ್ಪ** ಗ್ರಾಮದಲ್ಲಿ ಮಲ್ಟಿಕಲರ್ ಗ್ರಾನೈಟ್‌ಗಾಗಿ **ಮೆ|| ಚೆನ್ನಕೇಶವ ಎಕ್ಸ್‌ಪೋರ್ಟ್ಸ್** ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:**608** ರ ಗುತ್ತಿಗೆಯನ್ನು ಪುನರ್ ಸ್ಥಾಪಿಸುವ ಬಗ್ಗೆ

**ಉಲ್ಲೇಖ:** ಸರ್ಕಾರದ ಆದೇಶ ಸಂಖ್ಯೆ:ಸಿಐ:206:ಎಂಎಂಎನ್:2010, ದಿನಾಂಕ:–08–06–2010.

**ಪ್ರಸ್ತಾವನೆ:**

**ರಾಮನಗರ** ಜಿಲ್ಲೆ, **ಕನಕಪುರ** ತಾಲ್ಲೂಕು, **ಕೋಟಿಕೊಪ್ಪ** ಗ್ರಾಮದ ಸರ್ವೆ ಸಂಖ್ಯೆ:167 ರಲ್ಲಿ 2–20 ಎಕರೆ ವಿಸ್ತೀರ್ಣದಲ್ಲಿ **ಮಲ್ಟಿಕಲರ್ ಗ್ರಾನೈಟ್‌ಗಾಗಿ** ಕಲ್ಲು ಗಣಿ ಗುತ್ತಿಗೆ ಸಂಖ್ಯೆ:**608** ರ ಗುತ್ತಿಗೆಯನ್ನು **ಮೆ|| ಚೆನ್ನಕೇಶವ ಎಕ್ಸ್‌ಪೋರ್ಟ್ಸ್** ರವರ ಹೆಸರಿನಲ್ಲಿ ದಿನಾಂಕ:5–11–2003 ರಿಂದ 10 ವರ್ಷಗಳಿಗಾಗಿ ಗುತ್ತಿಗೆ ಮಂಜೂರು ಮಾಡಲಾಗಿತ್ತು. ಗುತ್ತಿಗೆದಾರರು ಗುತ್ತಿಗೆ ಮೇಲಿನ ಬಾಕಿ ಪಾವತಿಸದೆ ಇದ್ದ ಕಾರಣ ದಿನಾಂಕ:11–03–2010 ರಿಂದ ಜಾರಿಗೆ ಬರುವಂತೆ ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದ ಅಡಿಯಲ್ಲಿ ಗುತ್ತಿಗೆಯನ್ನು ರದ್ದುಪಡಿಸಲಾಗಿತ್ತು.

ಅದರಂತೆ ಗುತ್ತಿಗೆದಾರರು ಪರಿಷ್ಕರಣ ಅರ್ಜಿಯನ್ನು ನಿಯಮ 53(2) ರ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರಂತೆ ಸರ್ಕಾರಕ್ಕೆ ಸಲ್ಲಿಸಿದ್ದು, ಸರ್ಕಾರವು ಉಲ್ಲೇಖಿತ ಪತ್ರದಲ್ಲಿ ಅರ್ಜಿಯನ್ನು ಪರಿಗಣಿಸಿ ಗುತ್ತಿಗೆಯನ್ನು ಪುನರ್ ಸ್ಥಾಪಿಸಲು ಆದೇಶಿಸಿರುವುದರಿಂದ ಮತ್ತು ಗುತ್ತಿಗೆದಾರರು ಬಾಕಿಯನ್ನು ಪೂರ್ಣ ಪಾವತಿಸಿರುವುದರಿಂದ ಈ ಕೆಳಕಂಡ ಆದೇಶ ಮಾಡಲಾಗಿದೆ.

**ಆದೇಶ**

**ಆದೇಶ ಸಂಖ್ಯೆ:ಗಭೂಇ/ಡಿಸಿಬಿ/ಕಗನು/608/2011–12/893, ದಿನಾಂಕ:2ನೇ ಮೇ 2011**

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಸರ್ಕಾರದ ಪತ್ರದ ದಿನಾಂಕ:08–06–2010 ರಲ್ಲಿ ನಿರ್ದೇಶಿಸಿರುವಂತೆ **ರಾಮನಗರ** ಜಿಲ್ಲೆ, **ಕನಕಪುರ** ತಾಲ್ಲೂಕು, **ಕೋಟಿಕೊಪ್ಪ** ಗ್ರಾಮದ ಸರ್ವೆ ಸಂಖ್ಯೆ:167 ರಲ್ಲಿ 2–20 ಎಕರೆ ವಿಸ್ತೀರ್ಣದಲ್ಲಿ **ಮಲ್ಟಿಕಲರ್ ಗ್ರಾನೈಟ್‌ಗಾಗಿ** ಕಲ್ಲು ಗಣಿ ಗುತ್ತಿಗೆ ಸಂಖ್ಯೆ:**608** ರ ಗುತ್ತಿಗೆಯನ್ನು **ಮೆ|| ಚೆನ್ನಕೇಶವ ಎಕ್ಸ್‌ಪೋರ್ಟ್ಸ್** ರವರ ಹೆಸರಿನಲ್ಲಿ ಮಂಜೂರಾಗಿದ್ದ ಗುತ್ತಿಗೆಯನ್ನು ರದ್ದುಪಡಿಸಿದ ದಿನಾಂಕ: 11–03–2010 ರಿಂದ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮಾವಳಿ 1994 ರ ಷರತ್ತಿಗೆ ಒಳಪಡಿಸಿ, ಕಲ್ಲು ಗಣಿ ಗುತ್ತಿಗೆ ಅವಧಿ ಅಂತ್ಯದವರೆಗೆ ಹಾಗೂ ಇನ್ನಿತರ ಷರತ್ತಿನಂತೆ ಗುತ್ತಿಗೆಯನ್ನು **ಪುನರ್ ಸ್ಥಾಪಿಸಲಾಗಿದೆ.**

**ನಿರ್ದೇಶಕರು**
ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಬೆಂಗಳೂರು

**ಪಿ.ಆರ್.534**

## ಜಿಲ್ಲಾಧಿಕಾರಿಗಳು ಕಾರ್ಯಾಲಯ, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

**ನಂ. ಶಿಜಿನಕೋ:ಸಿಆರ್ (3) : (ಜೋಗಾ ಕಾರ್ಗಲ್) 228/:2010-11, ದಿನಾಂಕ:18-04-2011**

**ಅಧಿಸೂಚನೆ**

ಸರ್ಕಾರದ ಅಧಿಸೂಚನೆ ಸಂಖ್ಯೆ ಯುಡಿಡಿ 110/ಎಂ.ಎಲ್.ಆರ್:2010(1) ದಿನಾಂಕ:29-07-2010ರಲ್ಲಿ ಕರ್ನಾಟಕ ನಗರಸಭೆ ನಿಯಮ 13 ಮತ್ತು 13 ಎ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚುನಾವಣಾ (ತಿದ್ದುಪಡಿ) ನಿಯಮ 2007 ಮತ್ತು ಮಾರ್ಗಸೂಚಿ ಆದೇಶ ಯು ಡಿ ಡಿ 178/ಎಂ ಎಲ್ ಆರ್ (ಪಿ) ದಿನಾಂಕ: 23-01-2008 ಮತ್ತು 24-01-2008 ರಂತೆ, ಜೋಗಾ ಕಾರ್ಗಲ್, ಪಟ್ಟಣ ಪಂಚಾಯಿತಿಯ 6ನೇ ಅವಧಿಗೆ ಅಧ್ಯಕ್ಷ ಮೀಸಲಾತಿ ನಿಗಧಿಗೊಳಿಸಿ ಹೊರಡಿಸಿದ ಆದೇಶದಂತೆ ಕರ್ನಾಟಕ ಮುನಿಸಿಪಾಲಿಟೀಸ್ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚುನಾವಣಾ ನಿಯಮ 2 ಬಿ ಯಂತೆ ಮತ್ತು ಸರ್ಕಾರದ ದಿನಾಂಕ:13-08-2004ರ ಆದೇಶದಂತೆ ತಹಶೀಲ್ದಾರ್, ಸಾಗರ ತಾಲ್ಲೂಕ್, ಸಾಗರ ರವರನ್ನು ಚುನಾವಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು.

ತಹಶೀಲ್ದಾರ್, ಸಾಗರ ತಾಲ್ಲೂಕ್, ಸಾಗರರವರು ದಿನಾಂಕ:18-02-2011 ರಂದು ನಿಯಮಾನುಸಾರ ಜೋಗಾ ಕಾರ್ಗಲ್ ಪಟ್ಟಣ ಪಂಚಾಯಿತಿಯ ಅವಿಶ್ವಾಸ ನಿರ್ಣಯದಿಂದ ತೆರವಾದ ಅಧ್ಯಕ್ಷ ಸ್ಥಾನಕ್ಕೆ ಚುನಾವಣೆ ನಡೆಸಿ, ಈ ಕೆಳಗಿನಂತೆ ಅಧ್ಯಕ್ಷ ಸ್ಥಾನಕ್ಕೆ ಆಯ್ಕೆಯಾಗಿರುತ್ತಾರೆ ಎಂದು ವರದಿ ನೀಡಿರುತ್ತಾರೆ.

| ಕ್ರ.ಸಂ | ಚುನಾವಣೆ ನಡೆಸಿದ ಸ್ಥಾನ | ನಿಯಮದಂತೆ ನಿಗಧಿಗೊಳಿಸಿದ ಮೀಸಲಾತಿ | ಆಯ್ಕೆಯಾದ ಹೆಸರು |
|---|---|---|---|
| 01 | 02 | 03 | 04 |
| 01 | ಅಧ್ಯಕ್ಷ,<br>ಪಟ್ಟಣ ಪಂಚಾಯಿತಿ ಜೋಗಾ ಕಾರ್ಗಲ್ | ಪರಿಶಿಷ್ಟ ಜಾತಿ | ಶ್ರೀ ರಾಜು ಎಂ.ಬಿನ್. ಮರಿಯಪ್ಪ |

ಕರ್ನಾಟಕ ಮುನಿಸಿಪಾಲಿಟೀಸ್ (ಅಧ್ಯಕ್ಷ ಮತ್ತು ಉಪಾಧ್ಯಕ್ಷ) ಚುನಾವಣಾ ನಿಯಮ 12 ರಂತೆ, ಘೋಷಣಾಧಿಕಾರಿಯಾದ ನಾನು ಶ್ರೀ ರಾಜು ಎಂ.ಬಿನ್. ಮರಿಯಪ್ಪ ಇವರು ಜೋಗಾ ಕಾರ್ಗಲ್ ಪಟ್ಟಣ ಪಂಚಾಯಿತಿ ಅಧ್ಯಕ್ಷ ಸ್ಥಾನಕ್ಕೆ ಆಯ್ಕೆಯಾಗಿರುತ್ತಾರೆ ಎಂದು ಘೋಷಿಸಿದ್ದೇನೆ.

**ವಿ. ಪೊನ್ನುರಾಜ್,**
ಜಿಲ್ಲಾಧಿಕಾರಿ,
ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ

**ಪಿ.ಆರ್.535**

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರುರವರ ನಡವಳಿ

**ವಿಷಯ:** **ರಾಮನಗರ** ಜಿಲ್ಲೆ, **ಕನಕಪುರ** ತಾಲ್ಲೂಕು, **ಬಿಜ್ಜಹಳ್ಳಿ** ಗ್ರಾಮದಲ್ಲಿ ಕಪ್ಪು ಗ್ರಾನೈಟ್‌ಗಾಗಿ **ಮೆ॥ ಚೌಡೇಶ್ವರಿ ಗ್ರಾನೈಟ್ಸ್** ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:**722** ರ ಗುತ್ತಿಗೆಯನ್ನು ಗುತ್ತಿಗೆ ಮೇಲಿನ ಬಾಕಿ **ರೂ. 1,99,034/-** ಗಳನ್ನು ಪಾವತಿಸದೆ ಇದ್ದ ಕಾರಣ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ಅಂತಿಮ ನೋಟೀಸ್ ಪತ್ರ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/722/2010-11/10667-68, ದಿನಾಂಕ: 31-01-2011
2. 2009-10 ನೇ ಸಾಲಿನ ಡಿ.ಸಿ.ಬಿ ವರದಿಯಂತೆ.

**ಪ್ರಸ್ತಾವನೆ:**

**ರಾಮನಗರ** ಜಿಲ್ಲೆ, **ಕನಕಪುರ** ತಾಲ್ಲೂಕು, **ಬಿಜ್ಜಹಳ್ಳಿ** ಗ್ರಾಮದ ಸರ್ವೆ ಸಂಖ್ಯೆ:28 ರಲ್ಲಿ **ಮೆ॥ ಚೌಡೇಶ್ವರಿ ಗ್ರಾನೈಟ್ಸ್** ರವರಿಗೆ **ಕಪ್ಪು** ಗ್ರಾನೈಟ್‌ಗಾಗಿ 2-00 ಎಕರೆಗೆ ದಿನಾಂಕ:05-08-2006 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: **722** ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ (1) ರಂತೆ ಗುತ್ತಿಗೆದಾರರಿಗೆ ಅಂತಿಮ ನೋಟೀಸು ಪತ್ರವನ್ನು ನೀಡಿ ಗುತ್ತಿಗೆ ಮೇಲಿನ ಬಾಕಿಯನ್ನು 60 ದಿನಗಳೊಳಗೆ ಸಂದಾಯಿಸುವಂತೆ ತಿಳಿಸಲಾಗಿತ್ತು. ಆದರೆ, 2009-10 ನೇ ಸಾಲಿನ ಲೆಕ್ಕ ಪರಿಶೋಧನಾ ವರದಿಯಲ್ಲಿ ಉಪ ನಿರ್ದೇಶಕರು, ರಾಮನಗರ ಜಿಲ್ಲೆ ರವರು ವರದಿ ಮಾಡಿರುವಂತೆ 2010 ನೇ ಅಂತ್ಯಕ್ಕೆ ರೂ. **1,99,034/-** ಗಳು ಬಾಕಿ ಇದ್ದು ಗುತ್ತಿಗೆದಾರರು ಬಾಕಿ ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿರುವುದಾಗಿ ವರದಿ ಮಾಡಿರುತ್ತಾರೆ. ಅಲ್ಲದೆ, ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರು ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸ್‌ಗೆ ಯಾವ ರೀತಿಯು ಸ್ಪಂದಿಸಿಲ್ಲದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 39 ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ:418:ಎಂ.ಆರ್.ಸಿ:92, ದಿನಾಂಕ: 02-7-1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: **722** ರ ಗುತ್ತಿಗೆಯನ್ನು ರದ್ದು ಪಡಿಸುವ ಕ್ರಮ ಜರುಗಿಸುವುದು ಅವಶ್ಯಕವಾಗಿರುವುದರಿಂದ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ**

**ಆದೇಶ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/722/2011–12/1193, ದಿನಾಂಕ:10ನೇ ಮೇ 2011**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ **ರಾಮನಗರ** ಜಿಲ್ಲೆ, **ಕನಕಪುರ** ತಾಲ್ಲೂಕು, **ಬಿಜ್ಜಹಳ್ಳಿ** ಗ್ರಾಮದ ಸರ್ವೆ ಸಂಖ್ಯೆ: 28 ರಲ್ಲಿ 2–00 ಎಕರೆಗೆ **ಕಪ್ಪು ಗ್ರಾನೈಟ್‌ಗಾಗಿ** ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: **722** ರ ಗುತ್ತಿಗೆಯನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದೇ ಇರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ **ರದ್ದುಪಡಿಸಲಾಗಿದೆ** ಹಾಗೂ ಈ ಗುತ್ತಿಗೆ ಮಂಜೂರಾತಿ ಸಮಯದಲ್ಲಿ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಯು ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

**ಪಿ.ಆರ್.542**

**ನಿರ್ದೇಶಕರು**
ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರುರವರ ನಡವಳಿ

**ವಿಷಯ:** **ರಾಮನಗರ** ಜಿಲ್ಲೆ, **ಕನಕಪುರ** ತಾಲ್ಲೂಕು, **ಕುನೂರು** ಗ್ರಾಮದಲ್ಲಿ **ಮಲ್ಟಿಕಲರ್** ಗ್ರಾನೈಟ್‌ಗಾಗಿ **ಮೆ॥ ಸೋನಿ ಗ್ರಾನೈಟ್ಸ್** ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:**465** ರ ಗುತ್ತಿಗೆಯನ್ನು ಗುತ್ತಿಗೆ ಮೇಲಿನ ಬಾಕಿ **ರೂ. 3,90,236/–** ಗಳನ್ನು ಪಾವತಿಸದೆ ಇದ್ದ ಕಾರಣ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ಅಂತಿಮ ನೋಟೀಸ್ ಪತ್ರ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/465/2010–11/10531, ದಿನಾಂಕ: 27–01–2011

2. 2009–10 ನೇ ಸಾಲಿನ ಡಿ.ಸಿ.ಬಿ ವರದಿಯಂತೆ.

**ಪ್ರಸ್ತಾವನೆ:**

**ರಾಮನಗರ** ಜಿಲ್ಲೆ, **ಕನಕಪುರ** ತಾಲ್ಲೂಕು, **ಕುನೂರು** ಗ್ರಾಮದ ಸರ್ವೆ ಸಂಖ್ಯೆ:303 & 304 ರಲ್ಲಿ **ಮೆ॥ ಸೋನಿ ಗ್ರಾನೈಟ್** ರವರಿಗೆ **ಮಲ್ಟಿಕಲರ್** ಗ್ರಾನೈಟ್‌ಗಾಗಿ 4–00 ಎಕರೆಗೆ ದಿನಾಂಕ:10–09–2001 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: **465** ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ (1) ರಂತೆ ಗುತ್ತಿಗೆದಾರರಿಗೆ ಅಂತಿಮ ನೋಟೀಸು ಪತ್ರವನ್ನು ನೀಡಿ ಗುತ್ತಿಗೆ ಮೇಲಿನ ಬಾಕಿಯನ್ನು 60 ದಿನಗಳೊಳಗೆ ಸಂದಾಯಿಸುವಂತೆ ತಿಳಿಸಲಾಗಿತ್ತು. ಆದರೆ, 2009–10 ನೇ ಸಾಲಿನ ಲೆಕ್ಕ ಪರಿಶೋಧನಾ ವರದಿಯಲ್ಲಿ ಉಪ ನಿರ್ದೇಶಕರು, ರಾಮನಗರ ಜಿಲ್ಲೆ ರವರು ವರದಿ ಮಾಡಿರುವಂತೆ 2010 ನೇ ಅಂತ್ಯಕ್ಕೆ ರೂ. **3,90,236/–** ಗಳು ಬಾಕಿ ಇದ್ದು ಗುತ್ತಿಗೆದಾರರು ಬಾಕಿ ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿರುವುದಾಗಿ ವರದಿ ಮಾಡಿರುತ್ತಾರೆ. ಅಲ್ಲದೆ, ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರು ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸ್‌ಗೆ ಯಾವ ರೀತಿಯು ಸ್ಪಂದಿಸಿಲ್ಲದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 39 ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ:418:ಎಂ.ಆರ್.ಸಿ:92, ದಿನಾಂಕ: 02–7–1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: **465** ರ ಗುತ್ತಿಗೆಯನ್ನು ರದ್ದು ಪಡಿಸುವ ಕ್ರಮ ಜರುಗಿಸುವುದು ಅವಶ್ಯಕವಾಗಿರುವುದರಿಂದ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/465/2011–12/1166, ದಿನಾಂಕ:10ನೇ ಮೇ 2011**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ **ರಾಮನಗರ** ಜಿಲ್ಲೆ, **ಕನಕಪುರ** ತಾಲ್ಲೂಕು, **ಕುನೂರು** ಗ್ರಾಮದ ಸರ್ವೆ ಸಂಖ್ಯೆ:303 & 304 ರಲ್ಲಿ 4–00 ಎಕರೆಗೆ **ಮಲ್ಟಿಕಲರ್ ಗ್ರಾನೈಟ್‌ಗಾಗಿ** ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: **465** ರ ಗುತ್ತಿಗೆಯನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದೇ ಇರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ **ರದ್ದುಪಡಿಸಲಾಗಿದೆ** ಹಾಗೂ ಈ ಗುತ್ತಿಗೆ ಮಂಜೂರಾತಿ ಸಮಯದಲ್ಲಿ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಯು ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

**ಪಿ.ಆರ್.543**

**ನಿರ್ದೇಶಕರು**
ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ

**ವಿಷಯ:** **ರಾಮನಗರ** ಜಿಲ್ಲೆ, **ಚನ್ನಪಟ್ಟಣ** ತಾಲ್ಲೂಕು, **ಸುಳೇರಿ** ಗ್ರಾಮದಲ್ಲಿ **ಮಲ್ಟಿಕಲರ್** ಗ್ರಾನೈಟ್‌ಗಾಗಿ **ಮೆ॥ ಸುವ್ವಿ ಗ್ರಾನೈಟ್ಸ್** ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:**744** ರ ಗುತ್ತಿಗೆಯನ್ನು ಗುತ್ತಿಗೆ ಮೇಲಿನ ಬಾಕಿ **ರೂ. 1,10,413/–** ಗಳನ್ನು ಪಾವತಿಸದೆ ಇದ್ದ ಕಾರಣ ಗುತ್ತಿಗೆಯನ್ನು ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ಅಂತಿಮ ನೋಟೀಸ್ ಪತ್ರ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/744/2010–11/10936, ದಿನಾಂಕ: 09–02–2011

2. 2009–10 ನೇ ಸಾಲಿನ ಡಿ.ಸಿ.ಬಿ ವರದಿಯಂತೆ.

**ಪ್ರಸ್ತಾವನೆ:**

**ರಾಮನಗರ** ಜಿಲ್ಲೆ, **ಚನ್ನಪಟ್ಟಣ** ತಾಲ್ಲೂಕು, **ಸುಳೇರಿ** ಗ್ರಾಮದ ಸರ್ವೆ ಸಂಖ್ಯೆ:482 ರಲ್ಲಿ **ಮೆ॥ ಸುವ್ವಿ ಗ್ರಾನೈಟ್** ರವರಿಗೆ **ಮಲ್ಟಿಕಲರ್** ಗ್ರಾನೈಟ್‌ಗಾಗಿ 3–32 ಎಕರೆಗೆ ದಿನಾಂಕ:10–11–2005 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: **744** ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ (1) ರಂತೆ ಗುತ್ತಿಗೆದಾರರಿಗೆ ಅಂತಿಮ ನೋಟೀಸು ಪತ್ರವನ್ನು ನೀಡಿ ಗುತ್ತಿಗೆ ಮೇಲಿನ ಬಾಕಿಯನ್ನು 60 ದಿನಗಳೊಳಗೆ ಸಂದಾಯಿಸುವಂತೆ ತಿಳಿಸಲಾಗಿತ್ತು. ಆದರೆ, 2009–10 ನೇ ಸಾಲಿನ ಲೆಕ್ಕ ಪರಿಶೋಧನಾ ವರದಿಯಲ್ಲಿ ಉಪ ನಿರ್ದೇಶಕರು, ರಾಮನಗರ ಜಿಲ್ಲೆ ರವರು ವರದಿ ಮಾಡಿರುವಂತೆ 2010 ನೇ ಅಂತ್ಯಕ್ಕೆ ರೂ. **1,10,413/–** ಗಳು ಬಾಕಿ ಇದ್ದು ಗುತ್ತಿಗೆದಾರರು ಬಾಕಿ ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿರುವುದಾಗಿ ವರದಿ ಮಾಡಿರುತ್ತಾರೆ. ಅಲ್ಲದೆ, ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರು ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸ್‌ಗೆ ಯಾವ ರೀತಿಯು ಸ್ಪಂದಿಸಲ್ಲದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 39 ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ:418:ಎಂ.ಆರ್.ಸಿ:92, ದಿನಾಂಕ: 02–7–1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: **744** ರ ಗುತ್ತಿಗೆಯನ್ನು ರದ್ದು ಪಡಿಸುವ ಕ್ರಮ ಜರುಗಿಸುವುದು ಅವಶ್ಯಕವಾಗಿರುವುದರಿಂದ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/744/2011–12/1207, ದಿನಾಂಕ:11ನೇ ಮೇ 2011**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ **ರಾಮನಗರ** ಜಿಲ್ಲೆ, **ಚೆನ್ನಪಟ್ಟಣ** ತಾಲ್ಲೂಕು, **ಸುಳೇರಿ** ಗ್ರಾಮದ ಸರ್ವೆ ಸಂಖ್ಯೆ:482 ರಲ್ಲಿ 3–32 ಎಕರೆಗೆ **ಮಲ್ಟಿಕಲರ್ ಗ್ರಾನೈಟ್‌ಗಾಗಿ** ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: **744** ರ ಗುತ್ತಿಗೆಯನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದೇ ಇರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ **ರದ್ದುಪಡಿಸಲಾಗಿದೆ** ಹಾಗೂ ಈ ಗುತ್ತಿಗೆ ಮಂಜೂರಾತಿ ಸಮಯದಲ್ಲಿ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಯು ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

**ಪಿ.ಆರ್.544**

**ನಿರ್ದೇಶಕರು**
ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ

**ವಿಷಯ:** **ಬಳ್ಳಾರಿ** ಜಿಲ್ಲೆ, **ಬಳ್ಳಾರಿ** ತಾಲ್ಲೂಕು, **ಮುಷ್ಟಗಟ್ಟ** ಗ್ರಾಮದಲ್ಲಿ **ಗ್ರೇ** ಗ್ರಾನೈಟ್‌ಗಾಗಿ **ಮೆ॥ ನಂದಿ ಗ್ರಾನೈಟ್ಸ್** ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:**652** ರ ಗುತ್ತಿಗೆಯನ್ನು ಗುತ್ತಿಗೆ ಮೇಲಿನ ಬಾಕಿ **ರೂ. 1,31,061/–** ಗಳನ್ನು ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ಅಂತಿಮ ನೋಟೀಸ್ ಪತ್ರ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/652/2010–11/10669, ದಿನಾಂಕ: 31–01–2011

2. 2009–10 ನೇ ಸಾಲಿನ ಲೆಕ್ಕ ಪರಿಶೀಲನಾ ವರದಿ.

**ಪ್ರಸ್ತಾವನೆ:**

**ಬಳ್ಳಾರಿ** ಜಿಲ್ಲೆ, **ಬಳ್ಳಾರಿ** ತಾಲ್ಲೂಕು, **ಮುಷ್ಟಗಟ್ಟ** ಗ್ರಾಮದ ಸರ್ವೆ ಸಂಖ್ಯೆ:29/ಎ ರಲ್ಲಿ **ಮೆ॥ ನಂದಿ ಗ್ರಾನೈಟ್** ರವರಿಗೆ **ಗ್ರೇ** ಗ್ರಾನೈಟ್‌ಗಾಗಿ 2–00 ಎಕರೆಗೆ ದಿನಾಂಕ:10–05–2004 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: **652** ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ (1) ರಂತೆ ಗುತ್ತಿಗೆದಾರರಿಗೆ ಅಂತಿಮ ನೋಟೀಸು ಪತ್ರವನ್ನು ನೀಡಿ ಗುತ್ತಿಗೆ ಮೇಲಿನ ಬಾಕಿಯನ್ನು 60 ದಿನಗಳೊಳಗೆ ಸಂದಾಯಿಸುವಂತೆ ತಿಳಿಸಲಾಗಿತ್ತು. ಆದರೆ, 2009–10 ನೇ ಸಾಲಿನ ಲೆಕ್ಕ ಪರಿಶೀಲನಾ ವರದಿಯಲ್ಲಿ ಹಿರಿಯ ಭೂವಿಜ್ಞಾನಿ (ಖ), ಬಳ್ಳಾರಿ ರವರು ವರದಿ ಮಾಡಿರುವಂತೆ 2010 ನೇ ಸಾಲಿನ ಅಂತ್ಯಕ್ಕೆ ರೂ. **1,31,061/–** ಗಳು ಬಾಕಿ ಇದ್ದು ಗುತ್ತಿಗೆದಾರರು ಬಾಕಿ ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿರುವುದಾಗಿ ವರದಿ ಮಾಡಿರುತ್ತಾರೆ. ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರು ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸ್‌ಗೆ ಯಾವ ರೀತಿಯು ಸ್ಪಂದಿಸಿಲ್ಲದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 39 ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ:418:ಎಂ.ಆರ್.ಸಿ:92, ದಿನಾಂಕ: 02–7–1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: **652** ರ ಗುತ್ತಿಗೆಯನ್ನು ರದ್ದು ಪಡಿಸುವ ಕ್ರಮ ಜರುಗಿಸುವುದು ಅವಶ್ಯಕವಾಗಿರುವುದರಿಂದ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/652/2011–12/1184, ದಿನಾಂಕ:10ನೇ ಮೇ 2011**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ **ಬಳ್ಳಾರಿ** ಜಿಲ್ಲೆ, **ಬಳ್ಳಾರಿ** ತಾಲ್ಲೂಕು, **ಮುಷ್ಟಗಟ್ಟ** ಗ್ರಾಮದ ಸರ್ವೆ ಸಂಖ್ಯೆ:29/ಎ ರಲ್ಲಿ 2–00 ಎಕರೆಗೆ **ಗ್ರೇ ಗ್ರಾನೈಟ್‌ಗಾಗಿ** ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: **652** ರ ಗುತ್ತಿಗೆಯನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದೇ ಇರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ **ರದ್ದುಪಡಿಸಲಾಗಿದೆ** ಹಾಗೂ ಈ ಗುತ್ತಿಗೆ ಮಂಜೂರಾತಿ ಸಮಯದಲ್ಲಿ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಯು ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

**ಪಿ.ಆರ್.545**

**ನಿರ್ದೇಶಕರು**
ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು

## ನಿರ್ದೇಶಕರು, ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು ರವರ ನಡವಳಿ

**ವಿಷಯ:** **ಬಳ್ಳಾರಿ** ಜಿಲ್ಲೆ, **ಬಳ್ಳಾರಿ** ತಾಲ್ಲೂಕು, **ಮುಷ್ಟಗಟ್ಟ** ಗ್ರಾಮದಲ್ಲಿ ಗ್ರೇ ಗ್ರಾನೈಟ್‌ಗಾಗಿ **ಮೆ॥ ನಂದಿ ಗ್ರಾನೈಟ್ಸ್** ರವರಿಗೆ ಮಂಜೂರಾಗಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ:**651** ರ ಗುತ್ತಿಗೆಯನ್ನು ಗುತ್ತಿಗೆ ಮೇಲಿನ ಬಾಕಿ **ರೂ. 2,84,987/–** ಗಳನ್ನು ಪಾವತಿಸದೆ ಇದ್ದ ಕಾರಣ ರದ್ದುಗೊಳಿಸುವ ಬಗ್ಗೆ.

**ಉಲ್ಲೇಖ:** 1. ಈ ಕಛೇರಿಯ ಅಂತಿಮ ನೋಟೀಸ್ ಪತ್ರ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/651/2010–11/10665, ದಿನಾಂಕ: 31–01–2011

2. 2009–10 ನೇ ಸಾಲಿನ ಲೆಕ್ಕ ಪರಿಶೀಲನಾ ವರದಿ.

**<u>ಪ್ರಸ್ತಾವನೆ:</u>**

**ಬಳ್ಳಾರಿ** ಜಿಲ್ಲೆ, **ಬಳ್ಳಾರಿ** ತಾಲ್ಲೂಕು, **ಮುಷ್ಟಗಟ್ಟ** ಗ್ರಾಮದ ಸರ್ವೆ ಸಂಖ್ಯೆ:174/ಎ ರಲ್ಲಿ **ಮೆ॥ ನಂದಿ ಗ್ರಾನೈಟ್** ರವರಿಗೆ ಗ್ರೇ ಗ್ರಾನೈಟ್‌ಗಾಗಿ 3–00 ಎಕರೆಗೆ ದಿನಾಂಕ:10–05–2004 ರಿಂದ 10 ವರ್ಷಗಳಿಗಾಗಿ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: **651** ಮಂಜೂರು ಮಾಡಲಾಗಿತ್ತು. ಉಲ್ಲೇಖಿತ ಪತ್ರ (1) ರಂತೆ ಗುತ್ತಿಗೆದಾರರಿಗೆ ಅಂತಿಮ ನೋಟೀಸು ಪತ್ರವನ್ನು ನೀಡಿ ಗುತ್ತಿಗೆ ಮೇಲಿನ ಬಾಕಿಯನ್ನು 60 ದಿನಗಳೊಳಗೆ ಸಂದಾಯಿಸುವಂತೆ ತಿಳಿಸಲಾಗಿತ್ತು. ಆದರೆ, 2009–10 ನೇ ಸಾಲಿನ ಲೆಕ್ಕ ಪರಿಶೀಲನಾ ವರದಿಯಲ್ಲಿ ಹಿರಿಯ ಭೂವಿಜ್ಞಾನಿ (ಖ), ಬಳ್ಳಾರಿ ರವರು ವರದಿ ಮಾಡಿರುವಂತೆ 2010 ನೇ ಸಾಲಿನ ಅಂತ್ಯಕ್ಕೆ ರೂ. **2,84,987/–** ಗಳು ಬಾಕಿ ಇದ್ದು ಗುತ್ತಿಗೆದಾರರು ಬಾಕಿ ಪಾವತಿಸದೆ ಗುತ್ತಿಗೆಯನ್ನು ನಿಷ್ಕ್ರಿಯಗೊಳಿಸಿರುವುದಾಗಿ ವರದಿ ಮಾಡಿರುತ್ತಾರೆ. ಅಲ್ಲದೆ, ಸದರಿ ಗುತ್ತಿಗೆದಾರರಿಂದ ಇದುವರೆವಿಗೂ ಬಾಕಿ ಪಾವತಿಯಾಗಿರುವುದಿಲ್ಲ.

ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರು ಗಮನಕ್ಕೆ ಬಂದಂತೆ ಗುತ್ತಿಗೆದಾರರು ಮೇಲಿನ ಉಲ್ಲೇಖಿತ ನೋಟೀಸ್‌ಗೆ ಯಾವ ರೀತಿಯು ಸ್ಪಂದಿಸಿಲ್ಲದ ಕಾರಣ ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 39 ರಡಿ ಸರ್ಕಾರದ ಅಧಿಸೂಚನೆ III ಸಂಖ್ಯೆ:ಸಿಐ:418:ಎಂ.ಆರ್.ಸಿ:92, ದಿನಾಂಕ: 02–7–1994 ಪ್ರತ್ಯೋಜಿಸಿರುವ ಅಧಿಕಾರದಂತೆ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: **651** ರ ಗುತ್ತಿಗೆಯನ್ನು ರದ್ದು ಪಡಿಸುವ ಕ್ರಮ ಜರುಗಿಸುವುದು ಅವಶ್ಯಕವಾಗಿರುವುದರಿಂದ ಈ ಕೆಳಗಿನಂತೆ ಆದೇಶಿಸಿದೆ.

**ಆದೇಶ ಸಂಖ್ಯೆ:ಗಭೂಇ/ಡಿಸಿಬಿ/ಕಗಗು/651/2011–12/1175, ದಿನಾಂಕ:10ನೇ ಮೇ 2011**

ಕರ್ನಾಟಕ ಉಪ ಖನಿಜ ರಿಯಾಯಿತಿ ನಿಯಮ 1994 ರ ನಿಯಮ 39 ರಂತೆ ಗಣಿ ಮತ್ತು ಭೂ ವಿಜ್ಞಾನ ಇಲಾಖೆಯ, ನಿರ್ದೇಶಕರಿಗೆ ಪ್ರತ್ಯೋಜಿಸಿರುವ ಅಧಿಕಾರದಡಿಯಲ್ಲಿ **ಬಳ್ಳಾರಿ** ಜಿಲ್ಲೆ, **ಬಳ್ಳಾರಿ** ತಾಲ್ಲೂಕು, **ಮುಷ್ಟಗಟ್ಟ** ಗ್ರಾಮದ ಸರ್ವೆ ಸಂಖ್ಯೆ:174/ಎ ರಲ್ಲಿ 3–00 ಎಕರೆಗೆ **ಗ್ರೇ ಗ್ರಾನೈಟ್‌ಗಾಗಿ** ನೀಡಿದ್ದ ಕಲ್ಲು ಗಣಿ ಗುತ್ತಿಗೆ ಸಂಖ್ಯೆ: **651** ರ ಗುತ್ತಿಗೆಯನ್ನು ಗುತ್ತಿಗೆ ಮೇಲಿನ ಬಾಕಿ ಪಾವತಿಸದೇ ಇರುವ ಕಾರಣ ತಕ್ಷಣದಿಂದ ಜಾರಿಗೆ ಬರುವಂತೆ **ರದ್ದುಪಡಿಸಲಾಗಿದೆ** ಹಾಗೂ ಈ ಗುತ್ತಿಗೆ ಮಂಜೂರಾತಿ ಸಮಯದಲ್ಲಿ ಸಲ್ಲಿಸಿದ್ದ ಭದ್ರತಾ ಠೇವಣಿಯನ್ನು ಇಲಾಖೆಯು ಮುಟ್ಟುಗೋಲು ಹಾಕಿಕೊಳ್ಳಲಾಗಿದೆ.

**ಪಿ.ಆರ್.546**

**ನಿರ್ದೇಶಕರು**
ಗಣಿ ಮತ್ತು ಭೂವಿಜ್ಞಾನ ಇಲಾಖೆ, ಬೆಂಗಳೂರು

## ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ ನಡವಳಿಗಳು, ಬೆಂಗಳೂರು

**ವಿಷಯ:** ಶ್ರೀಮತಿ ಎಂ.ಎನ್. ರಂಜನಾರಾವ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಕೆ.ಆರ್. ಪೇಟೆ, ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿಡುವ ಕುರಿತು.

**ಉಲ್ಲೇಖ:** ಅಭಿಯೋಗ ಉಪನಿರ್ದೇಶಕರು, ಮೈಸೂರು ವಿಭಾಗ, ಮೈಸೂರು, ಇವರ ಫ್ಯಾಕ್ಸ್ ಸಂದೇಶ ದಿನಾಂಕ: 26.4.2011

**ಪ್ರಸ್ತಾವನೆ:–**

ಅಭಿಯೋಗ ಉಪ ನಿರ್ದೇಶಕರು, ಮೈಸೂರು ವಿಭಾಗ, ಮೈಸೂರು, ಇವರ ಉಲ್ಲೇಖಿತ ಫ್ಯಾಕ್ಸ್ ಸಂದೇಶದಲ್ಲಿ ಕೆ.ಆರ್. ಪೇಟೆ ಸಿ.ಜೆ.(ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯದ ಸಹಾಯಕ ಸರ್ಕಾರಿ ಅಭಿಯೋಜಕರಾದ ಶ್ರೀಮತಿ ಎಂ.ಎನ್. ರಂಜನಾರಾವ್, ಅವರು ದಿನಾಂಕ 25.04.2011ರ ಮಧ್ಯಾಹ್ನ 1.00 ಘಂಟೆಯ ಸಮಯದಲ್ಲಿ ಕೆ.ಆರ್. ಪೇಟೆ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯದ ಸಿಸಿ ನಂ. 347:2009ರ ಪ್ರಕರಣದ ಫಿರ್ಯಾದುದಾರರಾದ ಶ್ರೀಮತಿ ಶಾರದಮ್ಮ @ ಶಾರದ, ಅವರಿಂದ ಅವರಿಂದ ರೂ. 800/– (ಎಂಟು ನೂರು ರೂಪಾಯಿಗಳು) ಲಂಚ ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತರು ಬೀಸಿದ ಜಾಲಕ್ಕೆ ಸಿಕ್ಕಿದ್ದು, ಸದರಿ ಅಧಿಕಾರಿಯವರನ್ನು ದಸ್ತಗಿರಿ ಮಾಡಿರುವ ಬಗ್ಗೆ ವರದಿ ಸಲ್ಲಿಸಿರುತ್ತಾರೆ. ಸದರಿ ವರದಿ ಹಾಗೂ ಅದರೊಂದಿಗೆ ಸಲ್ಲಿಸಿರುವ ದಾಖಲಾತಿಗಳನ್ನು ಪರಿಶೀಲಿಸಲಾಗಿ ಈ ಅಧಿಕಾರಿಯವರ ವಿರುದ್ಧ ಮಂಡ್ಯ ಲೋಕಾಯುಕ್ತ ಪೋಲೀಸ್ ಠಾಣೆ ಮೊಕದ್ದಮೆ ಸಂಖ್ಯೆ: 08/2011 ಲಂಚ ನಿರೋಧ ಕಾಯ್ದೆ 1988ರ ಕಲಂ 7, 13(1) ಸಹ ಕಲಂ 13 (2)ರ ರೀತ್ಯಾ ಮೊಕದ್ದಮೆ ದಾಖಲಾಗಿದ್ದು, ಅಧಿಕಾರಿಯವರು ಮೇಲೆ ನಮೂದಿಸಿದ ಅಪರಾಧ ಎಸಗಿರುವುದು ಮೇಲ್ನೋಟಕ್ಕೆ ಕಂಡುಬರುತ್ತದೆ. ಆದ್ದರಿಂದ ಶ್ರೀಮತಿ ಎಂ.ಎನ್. ರಂಜನಾರಾವ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯ, ಕೆ.ಆರ್. ಪೇಟೆ, ಇವರನ್ನು ಸದರಿ ಹುದ್ದೆಯಲ್ಲಿ ಮುಂದುವರೆಸುವುದು ಸಮಂಜಸವಾಗಿರುವುದಿಲ್ಲ. ಆದ್ದರಿಂದ ಸದರಿ ಅಧಿಕಾರಿಯವರನ್ನು ಅಮಾನತ್ತಿನಲ್ಲಿಡುವುದು ಸಮಂಜಸವೆಂದು ಕಂಡು ಬಂದಿದ್ದರಿಂದ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸಂಖ್ಯೆ: ಡಿಪಿಎನ್:ಸಿಶಾ1–ಎ:16 : 2011–12 ಬೆಂಗಳೂರು, ದಿನಾಂಕ 27ನೇ ಏಪ್ರಿಲ್ 2011**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಶ್ರೀಮತಿ ಎಂ.ಎನ್. ರಂಜನಾರಾವ್, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆಎಂ.ಎಫ್‌ಸಿ ನ್ಯಾಯಾಲಯ, ಕೆ.ಆರ್. ಪೇಟೆ, ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10 (1)(ಎ)ರ ನಿಯಮದ ಅಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅವರ ವಿರುದ್ಧ ಇಲಾಖಾ ವಿಚಾರಣೆ ಬಾಕಿಯಿರಿಸಿ ಅವರನ್ನು ದಿನಾಂಕ 25.04.2011 ರಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತಿನಲ್ಲಿಡಲಾಗಿದೆ.

ಅಮಾನತ್ತಿನ ಅವಧಿಯಲ್ಲಿ ನಿಯಮಾನುಸಾರ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಶ್ರೀಮತಿ ಎಂ.ಎನ್. ರಂಜನಾರಾವ್, ಇವರು ಸಕ್ಷಮ ಪ್ರಾಧಿಕಾರದ ಅನುಮತಿಯಿಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

**ಹೆಚ್. ಆರ್. ರೇಣುಕ,**
ಅಭಿಯೋಗ ಮತ್ತು ಸರ್ಕಾರಿ
ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು

**ಪಿ.ಆರ್. 507**

## ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖಾ ನಿರ್ದೇಶಕರ ಕಛೇರಿಯ ನಡವಳಿಗಳು

**ವಿಷಯ :** 2010–11ರ ಸಾಲಿನಲ್ಲಿ "ಗ್ರೂಪ್ – ಬಿ" ವರ್ಗದ ಸಹಾಯಕ ಸರ್ಕಾರಿ ಅಭಿಯೋಜಕರು–ವ– ಸಹಾಯಕ ಸರ್ಕಾರಿ ವಕೀಲರುಗಳ ವರ್ಗಾವಣೆಯ ಬಗ್ಗೆ–

**ಉಲ್ಲೇಖ :** ಸರ್ಕಾರದ ಪತ್ರ ಸಂಖ್ಯೆ: ಒಇ 421 ಪಿಪಿಇ2010, ದಿನಾಂಕ:3/4.5.2011

**ಆದೇಶ ಸಂಖ್ಯೆ:ಡಿಪಿಎನ್:ಸಿಶಾ–1:ಎ:20:2010–11, ಬೆಂಗಳೂರು, ದಿನಾಂಕ: 13.05.2011**

ಸರ್ಕಾರದ ಉಲ್ಲೇಖಿತ ಪತ್ರದ ಸೂಚನೆಗಳನ್ವಯ, ಶ್ರೀ ವಾರದ ಮಲಕಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ರಾಮನಗರ, ಅವರನ್ನು ಕೋರಿಕೆಯ ಮೇರೆಗೆ ಶ್ರೀಮತಿ ಬಿ. ರಾಜೇಶ್ವರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.(ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಹೊಸಪೇಟೆ, ಅವರ ಸ್ಥಾನಕ್ಕೆ ವರ್ಗಾವಣೆ ಮಾಡಲಾಗಿದೆ.

ಶ್ರೀ ವಾರದ ಮಲಕಪ್ಪ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ರಾಮನಗರ, ಅವರು ತಮ್ಮ ಹುದ್ದೆಯ ಪ್ರಭಾರವನ್ನು ಶ್ರೀ ಕೆ. ಮೋಹನ್‌ಕುಮಾರ್, ಸಹಾಯಕ ಸರ್ಕಾರಿ ಅಭಿಯೋಜಕರು, ಅಧಿಕ ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ರಾಮನಗರ, ಅವರಿಗೆ ವಹಿಸಿಕೊಟ್ಟು ಬಿಡುಗಡೆ ಹೊಂದಲು ಹಾಗೂ ವರ್ಗಾವಣೆಗೊಂಡ ಹುದ್ದೆಯ ಪ್ರಭಾರವನ್ನು ಶ್ರೀಮತಿ ಬಿ. ರಾಜೇಶ್ವರಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಹೊಸಪೇಟೆ, ಅವರಿಂದ ವಹಿಸಿಕೊಳ್ಳಲು ಸೂಚಿಸಲಾಗಿದೆ. ಈ ವರ್ಗಾವಣೆಯು ಅಧಿಕಾರಿಯವರ ಕೋರಿಕೆಯ ಮೇರೆಗೆ ಆಗಿರುವುದರಿಂದ, ಅವರು ಯಾವುದೇ ರೀತಿಯ ಭತ್ಯೆ ಹಾಗೂ ಸೌಲಭ್ಯಗಳಿಗೆ ಅರ್ಹರಿರುವುದಿಲ್ಲ.

ಪ್ರಭಾರವನ್ನು ವಹಿಸಿಕೊಳ್ಳುವ ಅಧಿಕಾರಿಯವರು ಕಛೇರಿಗೆ ಸಂಬಂಧಪಟ್ಟಂತೆ ಗ್ರಂಥಾಲಯ, ಪೀಠೋಪಕರಣಗಳು, ಕಡತಗಳು ಮತ್ತು ವಹಿಗಳು ಇತ್ಯಾದಿಗಳನ್ನು ಒಳಗೊಂಡಂತೆ ವಿವರವಾದ ಪ್ರಭಾರವನ್ನು ವಹಿಸಿಕೊಂಡು, ಅವುಗಳ ಒಂದು ಪ್ರತಿಯನ್ನು ಸಿ.ಟಿ.ಸಿ.ಯೊಂದಿಗೆ ಸಂಬಂಧಪಟ್ಟ ವಿಭಾಗೀಯ ಕಛೇರಿಗೆ ಸಲ್ಲಿಸುವುದು. ಪ್ರಭಾರ ವಹಿಸಿಕೊಂಡ ಬಗ್ಗೆ ಸಿ.ಟಿ.ಸಿ.ಯನ್ನು ಮಾತ್ರ ರಕ್ಷಾ ಪತ್ರದೊಂದಿಗೆ ಈ ಕಛೇರಿಗೆ ಸಲ್ಲಿಸುವುದು.

ಯಾವುದಾದರೂ ಗ್ರಂಥಾಲಯ ಪುಸ್ತಕ ಹಾಗೂ ವಸ್ತುಗಳು ಕಾಣೆಯಾಗಿದ್ದಲ್ಲಿ ಅಥವಾ ಹಾಳಾಗಿದ್ದಲ್ಲಿ ಪ್ರತ್ಯೇಕ ವರದಿಯನ್ನು ವಿಭಾಗೀಯ ಕಛೇರಿಗೆ ಕೂಡಲೇ ಸಲ್ಲಿಸುವುದು. ಇಲ್ಲದಿದ್ದಲ್ಲಿ, ಪ್ರಭಾರವನ್ನು ವಹಿಸಿಕೊಳ್ಳುವ ಅಧಿಕಾರಿಯವರೇ ಅಂತಹ ಪುಸ್ತಕ ಹಾಗೂ ವಸ್ತುಗಳಿಗೆ ಜವಾಬ್ದಾರರಾಗಿರುತ್ತಾರೆ.

ಶ್ರೀಮತಿ ಬಿ. ರಾಜೇಶ್ವರಿ, ಸಿ.ಜೆ. (ಕಿವಿ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯ, ಹೊಸಪೇಟೆ, ಅವರು ತಮ್ಮ ಹುದ್ದೆಯ ಪ್ರಭಾರವನ್ನು ಶ್ರೀ ವಾರದ ಮಲಕಪ್ಪ, ಅವರಿಗೆ ವಹಿಸಿಕೊಟ್ಟು, ಬಿಡುಗಡೆ ಹೊಂದುವುದು. ಶ್ರೀಮತಿ ಬಿ. ರಾಜೇಶ್ವರಿ, ಅವರಿಗೆ ಸ್ಥಳ ನಿಯುಕ್ತಿ ಆದೇಶವಾಗುವವರೆಗೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು ಇವರ ಕಛೇರಿಯಲ್ಲಿ ವರದಿ ಮಾಡಿಕೊಂಡು, ಕಡ್ಡಾಯ ನಿರೀಕ್ಷಣಾ ಅವಧಿಯಲ್ಲಿ ಕಾರ್ಯ ನಿರ್ವಹಿಸುವಂತೆ ಸೂಚಿಸಲಾಗಿದೆ.

**ಹೆಚ್. ಆರ್. ರೇಣುಕ,**

**ಪಿ.ಆರ್. 573** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು

## ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ ನಡವಳಿಗಳು, ಬೆಂಗಳೂರು

**ವಿಷಯ:** ಶ್ರೀಮತಿ ಸಿ.ಕೆ.ಶ್ರೀವಾಣಿ, ಸಹಾಯಕ ಸರ್ಕಾರಿ ಅಭಿಯೋಜಕರು–ಸಹಾಯಕ ಸರ್ಕಾರಿ ವಕೀಲರು, ಸಿ.ಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಗೌರಿಬಿದನೂರು (ಹಾಲಿ ಅಮಾನತ್ತಿನಲ್ಲಿರುವವರು), ಇವರ ಅಮಾನತ್ತನ್ನು ರದ್ದುಪಡಿಸಿ ಸೇವೆಗೆ ಪುನರ್‌ನಿಯುಕ್ತಿಗೊಳಿಸುವ ಬಗ್ಗೆ.

**ಉಲ್ಲೇಖ:–** 1) ಈ ಕಛೇರಿಯ ಸಮಸಂಖ್ಯೆಯ ಆದೇಶ ದಿನಾಂಕ: 26.10.2010
2) ಸರ್ಕಾರದ ಪತ್ರ ಸಂಖ್ಯೆ: ಒಇ 71 ಪಿಪಿಇ 2011, ದಿನಾಂಕ: 29.04.2011
3) ಅಧಿಕಾರಿಯವರ ಮನವಿ ದಿನಾಂಕ: 04.05.2011

**ಪ್ರಸ್ತಾವನೆ:**

ಶ್ರೀಮತಿ ಸಿ.ಕೆ. ಶ್ರೀವಾಣಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಗೌರಿಬಿದನೂರು, ಇವರನ್ನು ಲೋಕಾಯುಕ್ತ ಪ್ರಕರಣಕ್ಕೆ ಸಂಬಂಧಿಸಿದಂತೆ ಉಲ್ಲೇಖ (1)ರ ಆದೇಶದಲ್ಲಿ ಅಮಾನತ್ತಿನಲ್ಲಿಡಲಾಗಿತ್ತು. ಸರ್ಕಾರದ ಉಲ್ಲೇಖ (2)ರ ಪತ್ರದಲ್ಲಿ, ಅಧಿಕಾರಿಯವರ ಅಮಾನತ್ತನ್ನು ತೆರವುಗೊಳಿಸಿ ಅವರನ್ನು ಸೇವೆಯಲ್ಲಿ ಪುನರ್ ಸ್ಥಳ ನಿಯುಕ್ತಿಗೊಳಿಸುವ ಬಗ್ಗೆ ಕ್ರಮ ತೆಗೆದುಕೊಳ್ಳಲು ಸೂಚಿಸಲಾಗಿದೆ. ಶ್ರೀಮತಿ ಸಿ.ಕೆ. ಶ್ರೀವಾಣಿ, ಸಹಾಯಕ ಸರ್ಕಾರಿ ಅಭಿಯೋಜಕರು, ಸಿ.ಜೆ.(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಗೌರಿಬಿದನೂರು (ಅಮಾನತ್ತಿನಲ್ಲಿರುವವರು), ಇವರು ಉಲ್ಲೇಖ (3)ರ ಮನವಿಯಲ್ಲಿ, ಅವರ ಅಮಾನತ್ತನ್ನು ರದ್ದುಪಡಿಸಿ, ಸೇವೆಗೆ ಪುನರ್ ನೇಮಕ ಮಾಡುವಂತೆ ಕೋರಿರುತ್ತಾರೆ. ಆದ್ದರಿಂದ, ಸದರಿಯವರ ಅಮಾನತ್ತನ್ನು ರದ್ದುಪಡಿಸಿ ಸೇವೆಗೆ ಪುನರ್‌ನಿಯುಕ್ತಿಗೊಳಿಸುವ ಸಂಬಂಧ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸಂಖ್ಯೆ: ಡಿಪಿಎನ್:ಸಿಶಾ1–ಎ:74 : 2010–11 ಬೆಂಗಳೂರು, ದಿನಾಂಕ 13ನೇ ಮೇ 2011**

ಶ್ರೀಮತಿ ಸಿ.ಕೆ. ಶ್ರೀವಾಣಿ, ಸಹಾಯಕ ಸರ್ಕಾರಿ ಅಭಿಯೋಜಕರು –ವ– ಸಹಾಯಕ ಸರ್ಕಾರಿ ವಕೀಲರು, ಸಿ.ಜೆ.(ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಗೌರಿಬಿದನೂರು (ಹಾಲಿ ಅಮಾನತ್ತಿನಲ್ಲಿರುವವರು), ಇವರ ವಿರುದ್ಧ ಲೋಕಾಯುಕ್ತ ಮೊಕದ್ದಮೆ ಬಾಕಿಯಿರಿಸಿ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ 10ನೇ ನಿಯಮದ ಉಪನಿಯಮ(ಸಿ) ರೀತ್ಯಾ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಅವರ ಅಮಾನತ್ತನ್ನು ರದ್ದುಪಡಿಸಿ, ಸಿಂಧಗಿಯ ಸಿಜೆ (ಕಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯದಲ್ಲಿ ಖಾಲಿ ಇರುವ ಸಹಾಯಕ ಸರ್ಕಾರಿ ಅಭಿಯೋಜಕರ–ವ– ಸಹಾಯಕ ಸರ್ಕಾರಿ ವಕೀಲರ ಹುದ್ದೆಗೆ ಪುನರ್ ನಿಯುಕ್ತಿಗೊಳಿಸಲಾಗಿದೆ. ಸದರಿ ಹುದ್ದೆಯ ಸಂಪೂರ್ಣ ಪ್ರಭಾರವನ್ನು ಶ್ರೀ ರೇವಣಸಿದ್ದಪ್ಪ ಕಾಶೀನಾಥ ಕಾಳೆ, ಸಹಾಯಕ ಸರ್ಕಾರಿ ಅಭಿಯೋಜಕರು –ವ– ಸಹಾಯಕ ಸರ್ಕಾರಿ ವಕೀಲರು, ಸಿ.ಜೆ (ಹಿವಿ) ಮತ್ತು ಜೆಎಂಎಫ್‌ಸಿ ನ್ಯಾಯಾಲಯ, ಸಿಂಧಗಿ, ಅವರಿಂದ ವಹಿಸಿಕೊಳ್ಳಲು ಸೂಚಿಸಲಾಗಿದೆ.

**ಹೆಚ್. ಆರ್. ರೇಣುಕ,**

**ಪಿ.ಆರ್. 576** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು

## ಕೃಷಿ ಇಲಾಖೆ

### ಅಧಿಸೂಚನೆ

**ಸಂಖ್ಯೆ: ಕೃತೋಇ/89/ಕೃರಾಗೊ/2011, ಬೆಂಗಳೂರು, ದಿನಾಂಕ: 2ನೇ ಮೇ, 2011.**

**ವಿಷಯ:** ಬಿಟಿ ಹತ್ತಿ ಬೀಜದ ದರವನ್ನು 2011–12ನೇ ಸಾಲಿನಲ್ಲಿ ನಿಗಧಿಪಡಿಸುವ ಬಗ್ಗೆ.

**ಉಲ್ಲೇಖ:** ಕೃಷಿ ಇಲಾಖೆಯ ಏಕ ಕಡತ ಸಂ: SFS 5/Bt ಹತ್ತಿ ಬೆಲೆ ನಿಗಧಿ/2011–12.

ಬಿಟಿ ಹತ್ತಿ ಬಿತ್ತನೆ ಬೀಜವನ್ನು ವಿವಿಧ ಬೀಜ ಉತ್ಪಾದಿಸುವ ಸಂಸ್ಥೆಗಳು ಉತ್ಪಾದನೆ ಮಾಡುತ್ತಿದ್ದು, ಅವುಗಳನ್ನು ರೈತರಿಗೆ ಸ್ಪರ್ಧಾತ್ಮಕ ದರದಲ್ಲಿ ದೊರೆಯುವಂತೆ ಮಾಡಲು ಉದ್ದೇಶಿಸಿದೆ. ಆದರೆ ಕೆಲವು ಸಂದರ್ಭಗಳಲ್ಲಿ ಬಿತ್ತನೆ ಬೀಜವನ್ನು ಹೆಚ್ಚಿನ ದರದಲ್ಲಿ ಮಾರಾಟ ಮಾಡುವ ಸಂಭವವಿರುತ್ತದೆ. ರೈತರಿಗೆ ಉತ್ತಮ ಗುಣಮಟ್ಟದ ಬಿತ್ತನೆ ಬೀಜವನ್ನು ಹಾಗೂ ಸ್ಪರ್ಧಾತ್ಮಕ ದರದಲ್ಲಿ ಪೂರೈಸುವ ನಿಟ್ಟಿನಲ್ಲಿ ಬಿಟಿ ಹತ್ತಿ ಬಿತ್ತನೆ ಬೀಜ ಉತ್ಪಾದಿಸುವ ಸಂಸ್ಥೆಗಳೊಂದಿಗೆ ಚರ್ಚಿಸಿ, ಬೀಜ ಉತ್ಪಾದನೆ ವೆಚ್ಚವನ್ನು ಆಧರಿಸಿ ಹಾಗೂ ಗುಜರಾತ್ ರಾಜ್ಯದಲ್ಲಿ ಪ್ರಸಕ್ತ ಸಾಲಿನಲ್ಲಿ ಜಾರಿಯಲ್ಲಿರುವ ಗರಿಷ್ಠ ಮಾರಾಟ ಬೆಲೆಯನ್ನು ಆಧರಿಸಿ ಕರ್ನಾಟಕ ರಾಜ್ಯದಲ್ಲಿಯೂ ಎಲ್ಲ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಕೂಲಂಕುಷವಾಗಿ ಪರಿಶೀಲಿಸಿ ಗರಿಷ್ಠ ಮಾರಾಟ ಬೆಲೆಯನ್ನು ರೈತರ ಹಿತ ದೃಷ್ಟಿಯಿಂದ ನಿಯಂತ್ರಿಸುವುದು ಅತಿ ಅವಶ್ಯಕವೆಂದು ಕಂಡು ಬಂದಿದೆ. ರೈತರಿಗೆ ಉತ್ತಮ ಗುಣಮಟ್ಟದ ಬಿತ್ತನೆ ಬೀಜವನ್ನು ಸೂಕ್ತ ದರದಲ್ಲಿ ಪೂರೈಸಲು ಅನುಕೂಲವಾಗುವುದು. ಗುಜರಾತ್ ರಾಜ್ಯದಲ್ಲಿರುವಂತೆ ನಮ್ಮ ರಾಜ್ಯದಾದ್ಯಂತ ಏಕರೂಪ ಮಾರಾಟ ಬೆಲೆ ಇರುವಂತೆ ನೋಡಿಕೊಳ್ಳಬೇಕಾಗಿದೆ. ಈ ಹಿನ್ನೆಲೆಯಲ್ಲಿ ಗರಿಷ್ಠ ಮಾರಾಟ ನಿಯಂತ್ರಿಸುವುದು ಅತಿ ಅವಶ್ಯಕವಾಗಿದೆ.

ಈ ಹಿನ್ನೆಲೆಯಲ್ಲಿ 2011–12ನೇ ಸಾಲಿನಲ್ಲಿ ಬಿಟಿ ಹತ್ತಿ ಬಿತ್ತನೆ ಬೀಜದ ದರವನ್ನು ಕೆಳಕಂಡಂತೆ ನಿಗಧಿಪಡಿಸಲಾಗಿದೆ. ಬಿಟಿ ಹತ್ತಿ ಬಿತ್ತನೆ ಬೀಜದ ದರವನ್ನು ಕೇಂದ್ರ ಸರ್ಕಾರದ ಅಗತ್ಯ ವಸ್ತು ಕಾಯ್ದೆ 1955 3(C) ಯಂತೆ ದತ್ತವಾದ ಅಧಿಕಾರವನ್ನು ಚಲಾಯಿಸಿ ದರವನ್ನು ನಿಗಧಿಪಡಿಸಲಾಗಿದೆ.

| ಬಿಟಿ ಹತ್ತಿ | ಯೂನಿಟ್ ತೂಕ (ಗ್ರಾಂಗಳಲ್ಲಿ) | ಗರಿಷ್ಠ ಮಾರಾಟ ಬೆಲೆ (ರೂ. ಗಳಲ್ಲಿ) |
|---|---|---|
| ಬಿಜಿ–I | 450 ಗ್ರಾಂ+120 ಗ್ರಾಂ ರೆಪ್ಯೂಜಿಯಾ | 830/– |
| ಬಿಜಿ–II | 450 ಗ್ರಾಂ+120 ಗ್ರಾಂ ರೆಪ್ಯೂಜಿಯಾ | 930/– |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಪರಂಧಾಮಯ್ಯ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಕೃಷಿ ಇಲಾಖೆ.

**ಪಿ.ಆರ್. 516**

## ಆರ್ಥಿಕ ಇಲಾಖೆ

### ಅಧಿಕೃತ ಜ್ಞಾಪನ

**ಸಂಖ್ಯೆ: ಆಇ 9 ಸಉಲಾ 2011, ಬೆಂಗಳೂರು, ದಿನಾಂಕ: 4ನೇ ಮೇ, 2011.**

**ವಿಷಯ:** ದಿನಾಂಕ: 01–01–2011ರಲ್ಲಿದ್ದಂತೆ ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ–ಋಣ ನಿರ್ವಹಣೆ ಇಲಾಖೆಯಲ್ಲಿನ ಸಹಾಯಕ ನಿರ್ದೇಶಕರ ವೃಂದದ ಅಂತಿಮ ಜೇಷ್ಠತಾ ಪಟ್ಟಿ ಪ್ರಕಟಿಸುವ ಬಗ್ಗೆ.

**ಉಲ್ಲೇಖ:** 1. ಸರ್ಕಾರದ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: ಆಇ 9 ಸಉಲಾ 2011, ದಿನಾಂಕ: 08–03–2011.

2. ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ–ಋಣ ನಿರ್ವಹಣೆ ಇಲಾಖೆಯ ನಿರ್ದೇಶಕರ ಪತ್ರ ಸಂಖ್ಯೆ: ಸಉಸಿ(3)90/2008–2009 ದಿನಾಂಕ: 13–04–2011

ಮೇಲೆ ಉಲ್ಲೇಖ (1)ರ ಅಧಿಕೃತ ಜ್ಞಾಪನದಲ್ಲಿ ದಿನಾಂಕ: 01–01–2011ರಲ್ಲಿದ್ದಂತೆ ಸಹಾಯಕ ನಿರ್ದೇಶಕರ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ ಪ್ರಕಟಿಸಿ ಈ ಕುರಿತು ಆಕ್ಷೇಪಣೆಗಳೇನಾದರೂ ಇದ್ದಲ್ಲಿ 30 ದಿನಗಳ ಒಳಗೆ ಸಲ್ಲಿಸಲು ಸೂಚಿಸಲಾಗಿತ್ತು. ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಯ ಬಗ್ಗೆ ಯಾರಿಂದಲೂ ಆಕ್ಷೇಪಣೆ ಬಂದಿಲ್ಲದಿರುವುದರಿಂದ ಸಹಾಯಕ ನಿರ್ದೇಶಕರ ವೃಂದದ ಅಂತಿಮ ಜೇಷ್ಠತಾ ಪಟ್ಟಿ ಪ್ರಕಟಿಸಲು ನಿರ್ದೇಶಕರು ಮೇಲೆ ಉಲ್ಲೇಖ (2)ರ ಪತ್ರದಲ್ಲಿ ಕೋರಿರುತ್ತಾರೆ.

ಆದ್ದರಿಂದ, ಪಿಂಚಣಿ, ಸಣ್ಣ ಉಳಿತಾಯ ಮತ್ತು ಆಸ್ತಿ–ಋಣ ನಿರ್ವಹಣೆ ಇಲಾಖೆಯಲ್ಲಿ ದಿನಾಂಕ: 01–01–2011ರಲ್ಲಿದ್ದಂತೆ ಸಹಾಯಕ ನಿರ್ದೇಶಕರುಗಳ ಅಂತಿಮ ಜೇಷ್ಠತಾ ಪಟ್ಟಿಯನ್ನು ಈ ಕೆಳಕಂಡಂತೆ ಪ್ರಕಟಿಸಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|
| 1 | 2 | 3 | 4 | 5 | 6 |
| 1. | ಜಿ.ಎಂ. ಶೆಡೋಳೆ | 25-09-1952 | 25-11-1977 | 11-12-1988 | 11-12-1988 |
| 2. | ಸಿ. ಕೃಷ್ಣಪ್ಪ | 09-06-1955 | 01-10-1981 | 01-04-1990 | 01-04-1990 |
| 3. | ಹೆಚ್. ರುದ್ರಪ್ಪ | 01-06-1954 | 27-03-1984 | 01-06-1992 | 01-06-1992 |
| 4. | ಟಿ. ಪುಟ್ಟಸ್ವಾಮಿ | 01-05-1954 | 01-12-1983 | 28-05-1992 | 28-05-1992 |
| 5. | ಮಹದೇವ ಮಡಿವಾಳ | 01-04-1953 | 11-07-1985 | 17-11-1992 | 16-11-1992 |
| 6. | ಎನ್. ರಂಗಯ್ಯ | 29-09-1962 | 02-09-1985 | 11-07-1993 | 11-07-1993 |

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು ಶ್ರೀ/ಶ್ರೀಮತಿ | ಜನ್ಮ ದಿನಾಂಕ | ಸರ್ಕಾರಿ ಸೇವೆಗೆ ಸೇರಿದ ದಿನಾಂಕ | ಪ್ರಸ್ತುತ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ದಿನಾಂಕ | ಅರ್ಹತಾ ದಿನಾಂಕ |
|---|---|---|---|---|---|
| 7. | ಶಂಕರ್. ಭೀ. ನಾಯಕವಾಡಿ | 20-05-1958 | 30-03-1984 | 04-08-1995 | 04-08-1995 |
| 8. | ಶಿವಾನಂದ | 18-05-1955 | 03-04-1984 | 04-08-1995 | 04-08-1995 |
| 9 | ಕೆ. ಸಿದ್ದಪ್ಪ | 07-10-1956 | 26-03-1984 | 04-12-1995 | 04-12-1995 |
| 10. | ಎಂ.ಕೆ. ಹೆಗಡೆ | 14-06-1959 | 03-04-1984 | 04-12-1995 | 04-12-1995 |
| 11. | ಎಂ.ಬಿ. ಸಿದ್ದರಾಜು | 08-05-1952 | 30-09-1985 | 20-12-1995 | 04-12-1995 |
| 12. | ಎಸ್.ಆರ್. ದುಂಡಗಿ | 20-07-1961 | 30-03-1984 | 03-08-2001 | 02-08-2001 |
| 13. | ಎಸ್. ಶ್ರೀನಿವಾಸಯ್ಯ | 10-04-1954 | 04-04-1984 | 02-08-2001 | 02-08-2001 |
| 14. | ಕೆ. ಸುಲೋಚನ | 12-07-1957 | 29-03-1984 | 03-08-2001 | 02-08-2001 |
| 15. | ಎಂ.ಎಸ್. ಪಾಟೀಲ್ | 20-07-1956 | 26-03-1984 | 03-08-2001 | 02-08-2001 |
| 16. | ವಿ. ಕಲಾವತಿ | 22-10-1964 | 02-09-1985 | 04-08-2001 | 02-08-2001 |
| 17. | ಎಂ.ಎ. ಮೂಡಲಗಿ | 01-06-1960 | 04-09-1985 | 03-08-2001 | 02-08-2001 |
| 18. | ಕೆ.ಆರ್. ನಾಗೇಂದ್ರರಾವ್ | 28-04-1960 | 09-09-1985 | 09-08-2001 | 02-08-2001 |
| 19. | ಚಂದ್ರೇಗೌಡ | 18-07-1961 | 04-09-1985 | 03-08-2001 | 02-08-2001 |
| 20. | ಬಿ. ಜಯಪ್ಪ | 03-06-1962 | 24-11-1988 | 03-08-2001 | 02-08-2001 |
| 21. | ಬಿ.ಜಿ. ಮಲ್ಲೇದೇವರು | 08-06-1954 | 05-09-1985 | 20-09-2001 | 13-09-2001 |
| 22. | ಜರೀನಾ ಎಂ. ಶೇಖ್ | 28-05-1954 | 06-09-1985 | 20-09-2001 | 13-09-2001 |
| 23. | ನಾಡಗಿರಿ ಶಂಕರ್. ಆರ್ | 19-07-1961 | 25-11-1988 | 18-09-2001 | 13-09-2001 |
| 24. | ಪಿ. ಲಿಂಗಪ್ಪ | 25-12-1954 | 02-09-1985 | 15-10-2004 | 03-09-2004 |
| 25. | ರಾಜಶೇಖರಯ್ಯ | 01-06-1960 | 03-09-1985 | 13-12-2007 | 01-12-2007 |
| 26. | ಜಿ.ಕೆ. ಗೌಡರ್ | 26-06-1960 | 10-09-1985 | 13-12-2007 | 01-12-2007 |
| 27. | ಮಹಮದ್ ಹುಸೇನ್ | 20-08-1959 | 03-07-1985 | 19-12-2007 | 01-12-2007 |
| 28. | ಡಿ. ನಾರಾಯಣಸ್ವಾಮಿ | 25-07-1962 | 26-11-1988 | 12-12-2007 | 01-12-2007 |
| 29. | ಟಿ.ಕೆ. ದಮಯಂತಿ | 21-07-1957 | 06-12-1985 | 19-07-2010 | 17-07-2010 |
| 30. | ಎಸ್.ಪಿ. ಧವಾಸ್ಕರ್ | 16-06-1952 | 04-07-1975 | 16-08-2010 | 17-07-2010 |
| 31. | ಗೌಸ್ ಮೊಹಿಯುದ್ದೀನ್ | 05-09-1954 | 09-09-1985 | 19-07-2010 | 17-07-2010 |
| 32. | ಬಿ.ಎಂ. ಪಾಂಡುರಂಗಯ್ಯ | 25-07-1959 | 24-11-1988 | 19-07-2010 | 17-07-2010 |
| 33. | ಎ. ಪುಟ್ಟರಾಜು | 14-03-1961 | 01-12-1988 | 07-09-2010 | 17-07-2010 |
| 34. | ವಿ.ಎಸ್. ಚವ್ಹಾಣ್ | 07-08-1955 | 28-11-1988 | 16-08-2010 | 11-08-2010 |

**ಎಂ.ಎಸ್. ಶಿವರಾಮ್,**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡಗಳು).

**ಪಿ.ಆರ್. 517**

## ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಚೇರಿ, ಬಾಗಲಕೋಟ.

### ಅಧಿಸೂಚನೆ

**ಸಂಖ್ಯೆ: ಇ 2:7586:ಪ್ರಾಶಾಶಿ:ಸ್ವಇನಿ:59:2008–09/421 ದಿನಾಂಕ: 26ನೇ ಏಪ್ರಿಲ್, 2011.**

**ವಿಷಯ:** ಸರಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ರಾಜೀನಾಮೆ ಅಂಗೀಕರಿಸುವ ಕುರಿತು.

**ಉಲ್ಲೇಖ:** 1. ಕ್ಷೇತ್ರ ಶಿಕ್ಷಣಾಧಿಕಾರಿಗಳು ಜಮಖಂಡಿ ಇವರ ಪ್ರಸ್ತಾವನೆ ಪತ್ರ ಸಂಖ್ಯೆ ಎ1: ಪ್ರಾಶಾಶಿ: ರಾಜೀನಾಮೆ: ಮಂ: 2010–11/1376 ದಿನಾಂಕ: 15–02–2011.

**ಪ್ರಸ್ತಾವನೆ:**

ಸರಕಾರಿ ಪ್ರಾಥಮಿಕ ಈ ಕೆಳಕಂಡ ಶಾಲಾ ಶಿಕ್ಷಕರು ಬೇರೆ ಇಲಾಖೆಗೆ ನೇಮಕಾತಿ ಹೊಂದಿದ್ದು ಸಹ ಶಿಕ್ಷಕ ಹುದ್ದೆಗೆ ರಾಜೀನಾಮೆ ನೀಡಿರುತ್ತಾರೆ. ಸದರಿ ಶಿಕ್ಷಕರುಗಳ ರಾಜೀನಾಮೆ ಅಂಗೀಕರಿಸುವಂತೆ ಕ್ಷೇತ್ರ ಶಿಕ್ಷಣಾಧಿಕಾರಿಗಳು ಜಮಖಂಡಿ ಇವರು ಉಲ್ಲೇಖ 1 ರಡಿ ಪ್ರಸ್ತಾವನೆಯನ್ನು ಈ ಕಚೇರಿಗೆ ಸಲ್ಲಿಸಿರುತ್ತಾರೆ. ಸದರಿ ಪ್ರಸ್ತಾವನೆ ಪರಿಶೀಲಿಸಲಾಗಿ ಸದರಿ ಶಿಕ್ಷಕರ ವೈಯಕ್ತಿಕ ತೊಂದರೆ ಮೇರೆಗೆ ಕೋರಿಕೆ ಪತ್ರ, ಇಲಾಖಾ ವಿಚಾರಣೆ ಇಲ್ಲದ ಬಗ್ಗೆ, ನ್ಯಾಯಾಂಗ ವಿಚಾರಣೆ ಇಲ್ಲದ ಬಗ್ಗೆ, ಪ್ರಮಾಣ ಪತ್ರಗಳ ದಾಖಲೆಗಳನ್ನು ಲಗತ್ತಿಸಲಾಗಿದೆ.

| ಅ.ನಂ. | ಶಿಕ್ಷಕರ ಹೆಸರು ಹಾಗೂ ಶಾಲಾ ವಿಳಾಸ | ಸೇವೆಗೆ ಸೇರಿದ ದಿನಾಂಕ | ಖಾಯಂ ಪೂರ್ವ ಸೇವಾ ಅವಧಿ ಘೋಷಿಸಿದ ದಿನಾಂಕ | ರಾಜೀನಾಮೆಗೆ ಕೋರಿ ಸಲ್ಲಿಸಿದ ಅರ್ಜಿ ದಿನಾಂಕ | ಷರಾ |
|---|---|---|---|---|---|
| **01** | **02** | **03** | **04** | **05** | **06** |
| 01 | ಶ್ರೀ ಜಿ.ವ್ಹಿ. ಕಾಂತಿ, ಸಶಿ, ಸ.ಹಿ.ಪ್ರಾ.ಶಾಲೆ, ಬ್ಯಾಡಗಿ ವಸ್ತಿ ಸಾವಳಗಿ | 01–06–2007 | ಮಂಜೂರಿಸಿಲ್ಲ | 22–01–2010 | ಅಂಚೆ ಕಛೇರಿ |
| 02 | ಶ್ರೀ ಶ್ರೀಧರಮೂರ್ತಿ ಎನ್.ಕೆ. ಸಶಿ, ಸ.ಕಿ.ಪ್ರಾ.ಶಾಲೆ, ಸೀಮಿಲಕ್ಕವ್ವನಗುಡಿ ಚಿಮ್ಮಡ. | 07–03–2005 | 07–03–2007 | 21–01–2010 | ವೈಯಕ್ತಿಕ ಕಾರಣ |
| 03 | ಶ್ರೀ ಪಿ.ಎಲ್. ರಾಠೋಡ, ಸಶಿ, ಸ.ಹಿ.ಪ್ರಾ.ಶಾಲೆ, ಕನ್ನೊಳ್ಳಿ ತೋಟ | 06–02–2007 | 06–02–2009 | 30–03–2010 | ವೈಯಕ್ತಿಕ ಕಾರಣ |

ಸದರಿ ಶಿಕ್ಷಕರು ರಾಜೀನಾಮೆ ಕೋರಿದ ದಿನಾಂಕದಿಂದ ಜಾರಿಗೆ ಬರುವಂತೆ ರಾಜೀನಾಮೆ ಅಂಗೀಕರಿಸಲು ಉಲ್ಲೇಖ 1 ರ ಶಿಫಾರಸ್ಸಿನನ್ವಯ ಈ ಕೆಳಕಂಡಂತೆ ಆದೇಶಿಸಿದೆ.

### ಆದೇಶ

ಪ್ರಸ್ತಾವನೆಯಲ್ಲಿ ವಿಷದೀಕರಿಸಿದಂತೆ ಉಲ್ಲೇಖ 1 ರ ಶಿಫಾರಸ್ಸಿನ ಮೇರೆಗೆ ಮೇಲ್ಕಾಣಿಸಿದ 04 ಜನ ಸರಕಾರಿ ಪ್ರಾಥಮಿಕ ಶಾಲಾ ಶಿಕ್ಷಕರು ಸಹ ಶಿಕ್ಷಕ ಹುದ್ದೆಯ ರಾಜೀನಾಮೆಗೆ ಕೋರಿಕೆ ಸಲ್ಲಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಈ ಕೆಳಕಂಡ ಷರತ್ತಿಗೊಳಪಟ್ಟು ರಾಜೀನಾಮೆ ಅಂಗೀಕರಿಸಿ ಆದೇಶಿಸಿದೆ.

**ಷರತ್ತುಗಳು:**

1. ರಾಜೀನಾಮೆ ಅಂಗೀಕರಿಸುವಂತೆ ಕೋರಿ ಪ್ರಸ್ತಾವನೆ ಸಲ್ಲಿಸುವ ಪೂರ್ವದಲ್ಲಿ ಸದರಿ ಶಿಕ್ಷಕರ ಕುಟುಂಬ ಸದಸ್ಯರ ಒಪ್ಪಿಗೆ ಪಡೆದಿರತಕ್ಕದ್ದು.
2. ಅರ್ಜಿದಾರರು 3 ತಿಂಗಳ ಅವಧಿಯವರೆಗೆ ಅರ್ಜಿ ಸಲ್ಲಿಸಿರಬೇಕು.
3. ಸದರಿ ಶಿಕ್ಷಕರು ಇಲಾಖಾ/ನ್ಯಾಯಾಲಯ ವಿಚಾರಣೆ ಹೊಂದಿರಕೂಡದು.
4. ಸದರಿ ಶಿಕ್ಷಕರು ಸಂಸ್ಥೆಗಳಿಗೆ, ಶಾಲೆಗಳಿಗೆ, ಮತ್ತು ಸರಕಾರಕ್ಕೆ ಯಾವುದೇ ಬೇಬಾಕಿ ಹಣ ತುಂಬುವುದು ಇಲ್ಲದ ಬಗ್ಗೆ ಪರಿಶೀಲಿಸಿ ಕ್ರಮ ಜರುಗಿಸುವುದು.
5. ಸದರಿ ಶಿಕ್ಷಕರ ರಾಜೀನಾಮೆ ಅಂಗೀಕಾರಗೊಂಡ ನಂತರ ಸಂಬಂಧಿಸಿದ ಶಿಕ್ಷಕರ ಸೇವಾ ಪುಸ್ತಕದಲ್ಲಿ ನಮೂದಿಸಿ ದೃಢೀಕರಿಸಿ ಮುಂದೆ ಸದರಿ ಹುದ್ದೆಗೆ ಹಾಜರಾಗಲು ಅವಕಾಶ ನೀಡದಂತೆ ಸೂಚನೆ ನೀಡುವುದು.
6. ಸದರಿ ಷರತ್ತುಗಳು ಪಾಲನೆಯಾದ ಬಗ್ಗೆ ಖಚಿತಪಡಿಸಿಕೊಂಡು ನಿಮ್ಮ ಹಂತದಲ್ಲಿ ಮತ್ತೊಮ್ಮೆ ಜ್ಞಾಪನ ಹೊರಡಿಸುವ ಷರತ್ತಿಗೊಳಪಟ್ಟಿರುತ್ತದೆ.

**ಪಿ.ಆರ್. 518** ಉಪನಿರ್ದೇಶಕರು (ಆಡಳಿತ)

**ಸಹಕಾರ ಸಂಘಗಳ ಉಪನಿಬಂಧಕರು, ಮಿನಿವಿಧಾನಸೌಧ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು**

**ವಿಷಯ:** ಸಣ್ಣ ನೀರಾವರಿ ನೀರು ಬಳಕೆದಾರರ ಸ.ಸಂ.ನಿ., ಡೊಂಕಿಹಳ್ಳಿ ತುರುವೇಕೆರೆ ತಾಲ್ಲೂಕು, ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ:**
1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಇವರ ಪ್ರಸ್ತಾವೆ ಸಂ.ಸನಿ–34/ಸಮಾಪನೆ/ 6/2009–10 ದಿನಾಂಕ: 31–05–2010.
2) ಈ ಕಛೇರಿ ಆದೇಶ ಸಂ.ಡಿಆರ್‌ಟಿ:ಎಲ್‌ಕ್ಯೂಡಿ: 8/2010–11 ದಿನಾಂಕ: 30–06–2011.
3) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತಿಪಟೂರು ಇವರ ಪ್ರಸ್ತಾವೆ ಸಂ.ಸನಿ–34/ಸಮಾಪನೆ/6 /2009–10 ದಿನಾಂಕ: 29–3–2011.

**ಪ್ರಸ್ತಾವನೆ:**

ತುರುವೇಕೆರೆ ತಾಲ್ಲೂಕು ಡೊಂಕಿಹಳ್ಳಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘವು ಕಾರ್ಯಸ್ಥಗಿತಗೊಂಡ ಕಾರಣ ಸಂಘವನ್ನು ಸಮಾಪನೆಗೊಳಿಸುವಂತೆ, ಉಲ್ಲೇಖ (1) ರಲ್ಲಿ ಪ್ರಸ್ತಾವೆ ಸಲ್ಲಿಸಲಾಗಿತ್ತು.

ಉಲ್ಲೇಖ (2) ರೀತ್ಯಾ ಸಂಘವನ್ನು ಸಮಾಪನೆಗೊಳಿಸಿ ಆಸ್ತಿ ಜವಾಬ್ದಾರಿ ತೀರುವಳಿ ಮಾಡಿ ನೋಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸುವಂತೆ ಆದೇಶಿಸಲಾಗಿತ್ತು.

ಉಲ್ಲೇಖ (3) ರಲ್ಲಿ ಸಮಾಪನಾಧಿಕಾರಿಗಳು ಆಸ್ತಿ ಜವಾಬ್ದಾರಿ ವಿಲೇವಾರಿ ಮಾಡಿ ಶೂನ್ಯಗೊಳಿಸಿ ನೋಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸಿರುವುದನ್ನು ಸಹಾಯಕ ನಿಬಂಧಕರು, ತಿಪಟೂರು ಇವರು ಶಿಫಾರಸ್ಸು ಮಾಡಿರುತ್ತಾರೆ. ಪ್ರಯುಕ್ತ ಈ ಕೆಳಕಂಡ ಆದೇಶ.

**ಆದೇಶ**

**ನಂ: ಡಿಆರ್‌ಟಿ:ಎಲ್‌ಕ್ಯೂಡಿ:08/ನೋರ/2010–11, ದಿನಾಂಕ: 31–03–2011**

ಪ್ರಸ್ತಾವೆಯಲ್ಲಿ ವಿವರಿಸಿರುವಂತೆ ಶ್ರೀ. ಆರ್. ಲೋಕೇಶ್, ಸಹಕಾರ ಸಂಘಗಳ ಉಪ–ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯೂ :69: ಸಿಎಲ್ಎಂ/ 2001 ದಿನಾಂಕ: 21–11–2001ರಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಡೊಂಕಿಹಳ್ಳಿ, ತುರುವೇಕೆರೆ ತಾಲ್ಲೂಕು ಇದರ ನೋಂದಣಿ ಸಂ.ಎಆರ್–34/ನೋಂದಣಿ 26815/2000–2001 ದಿನಾಂಕ:30–09–2000ನ್ನು ರದ್ದುಪಡಿಸಿರುತ್ತೇನೆ.

ತಕ್ಷಣದಿಂದ ಜಾರಿಗೆ ಬರುವಂತೆ ಸಂಘವನ್ನು ವಿಸರ್ಜನೆಗೊಳಿಸಿದೆ ಮತ್ತು ಇಂದಿನಿಂದ ಅಸ್ತಿತ್ವದಲ್ಲಿರುವುದಿಲ್ಲ.

ಈ ಆದೇಶವನ್ನು ನನ್ನ ಸ್ವ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ದಿನಾಂಕ:31–03–2011 ರಂದು ನೀಡಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ತುಮಕೂರು ಜಿಲ್ಲೆ, ತುಮಕೂರು.

**ಪಿ.ಆರ್. 524**

**ಸಹಕಾರ ಸಂಘಗಳ ಉಪನಿಬಂಧಕರು, ಮಿನಿವಿಧಾನಸೌಧ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು**

**ವಿಷಯ:** ಸಣ್ಣ ನೀರಾವರಿ ನೀರು ಬಳಕೆದಾರರ ಸ.ಸಂ.ನಿ., ಮಣುವಿನಕುರಿಕೆ ಕೊರಟಗೆರೆ ತಾಲ್ಲೂಕು, ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ:**
1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ ಮಧುಗಿರಿ ಇವರ ಪ್ರಸ್ತಾವೆ ಸಂ.ಸನಿ–33/ಸಮಾಪನೆ/ಸಿಆರ್46/2010–11 ದಿನಾಂಕ: 27–08–2010.
2) ಈ ಕಛೇರಿ ಆದೇಶ ಸಂ.ಡಿಆರ್‌ಟಿ:ಎಲ್‌ಕ್ಯೂಡಿ: ಸಿಆರ್03/2010–11 ದಿನಾಂಕ: 30–11–2011.
3) ಋಣ ಸಮಾಪನಾಧಿಕಾರಿಗಳ ಪ್ರಸ್ತಾವೆ ಸಂ.ಸಅಅಕೊ:ಋಣ ಸಮಾಪನೆ/ಸನೀನೀ ಬಸಸಂಘ ನಿ.,/ ಮಣುವಿನಕುರಿಕೆ/103/10–11 ದಿನಾಂಕ: 31–3–2011.

**ಪ್ರಸ್ತಾವನೆ:**

ಸಣ್ಣ ನೀರಾವರಿ ನೀರು ಬಳಕೆದಾರರ ಸ.ಸಂ.ನಿ., ಮಣುವಿನಕುರಿಕೆ ಕೊರಟಗೆರೆ ತಾಲ್ಲೂಕು, ಈ ಸಂಘವು ನೋಂದಣಿಯಾದ ಉದ್ದೇಶದಂತೆ ಕಾರ್ಯಚಟುವಟಿಕೆ ನಡೆಸದೆ ಸ್ಥಗಿತಗೊಂಡ ಹಿನ್ನೆಲೆಯಲ್ಲಿ ಉಲ್ಲೇಖ (1)ರ ಪ್ರಸ್ತಾವೆಯನ್ನು ಸಂಘವನ್ನು ಸಮಾಪನೆಗೊಳಿಸುವಂತೆ ಕೋರಿ ಪ್ರಸ್ತಾವೆ ಸಲ್ಲಿಸಲಾಗಿತ್ತು.

ಉಲ್ಲೇಖ (2) ರೀತ್ಯಾ ಸಂಘವನ್ನು ಸಮಾಪನೆಗೊಳಿಸಿ ಸಮಾಪನಾಧಿಕಾರಿಯನ್ನಾಗಿ ಸಹಕಾರ ಅಭಿವೃದ್ಧಿ ಅಧಿಕಾರಿ ಕೊರಟಗೆರೆ ಇವರನ್ನು ನೇಮಿಸಿ ಆದೇಶಿಸಲಾಗಿತ್ತು.

ಉಲ್ಲೇಖ (3) ರ ರೀತ್ಯಾ ಋಣಸಮಾಪನಾಧಿಕಾರಿಗಳು ಸಂಘಕ್ಕೆ ಆಸ್ತಿ ಜವಾಬ್ದಾರಿ ತೀರುವಳಿ ಮಾಡಿ ನೋಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸಿರುತ್ತಾರೆ. ಪ್ರಯುಕ್ತ ಪ್ರಸ್ತಾವೆಯನ್ನು ಪರಿಗಣಿಸಿ ಈ ಕೆಳಕಂಡ ಆದೇಶ.

**ಆದೇಶ**

**ನಂ: ಡಿಆರ್‌ಟಿ:ಎಲ್‌ಕ್ಯೂಡಿ:01 /2010–11, ದಿನಾಂಕ: 31–03–2011**

ಪ್ರಸ್ತಾವೆಯಲ್ಲಿ ವಿವರಿಸಿರುವಂತೆ ಶ್ರೀ. ಆರ್. ಲೋಕೇಶ್, ಸಹಕಾರ ಸಂಘಗಳ ಉಪ–ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯೂ :69: ಸಿಎಲ್‌ಎಂ/ 2001 ದಿನಾಂಕ: 21–11–2001ರಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ಮಣುವಿನಕುರಿಕೆ ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ ಈ ಸಂಘದ ನೋಂದಣಿ ಸಂ.ಸನಿ–33/ಆರ್‌ಎನ್‌ಆರ್/ಜೆಒಕ್ಯೂ/26498/2000–2001 ದಿನಾಂಕ:30–09–2000ನ್ನು ರದ್ದುಪಡಿಸಿದೆ. ಸಂಘವು ಅಸ್ತಿತ್ವದಲ್ಲಿರುವುದಿಲ್ಲ ವಿಸರ್ಜನೆಗೊಂಡಿರುತ್ತದೆ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ದಿನಾಂಕ:31–03–2011 ರಂದು ನೀಡಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ತುಮಕೂರು ಜಿಲ್ಲೆ, ತುಮಕೂರು.

**ಪಿ.ಆರ್. 525**

**ಸಹಕಾರ ಸಂಘಗಳ ಉಪನಿಬಂಧಕರು, ಮಿನಿವಿಧಾನಸೌಧ, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯಾಲಯದ ನಡವಳಿಕೆಗಳು**

**ವಿಷಯ:** ಸಣ್ಣ ನೀರಾವರಿ ನೀರು ಬಳಕೆದಾರರ ಸ.ಸಂ.ನಿ., ತುಂಬಾಡಿ ಕೊರಟಗೆರೆ ತಾಲ್ಲೂಕು, ಇದರ ನೋಂದಣಿ ರದ್ದತಿ ಬಗ್ಗೆ.

**ಉಲ್ಲೇಖ:** 1) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ ಮಧುಗಿರಿ ಇವರ ಪ್ರಸ್ತಾವೆ ಸಂ.ಸನಿ–33/ಸಮಾಪನೆ/ಸಿಆರ್46/2010–11 ದಿನಾಂಕ: 27–08–2010.

2) ಈ ಕಛೇರಿ ಆದೇಶ ಸಂ.ಡಿಆರ್‌ಟಿ:ಎಲ್‌ಕ್ಯೂಡಿ: ಸಿಆರ್04/2010–11 ದಿನಾಂಕ: 30–11–2011.

3) ಋಣ ಸಮಾಪನಾಧಿಕಾರಿಗಳ ಪ್ರಸ್ತಾವೆ ಸಂ.ಸಅಅಕೊ: ಋಣ ಸಮಾಪನೆ/ಸನೀನೀ ಬಸಸಂಘ ನಿ.,/ತುಂಬಾಡಿ/102/10–11 ದಿನಾಂಕ: 31–03–2011.

**ಪ್ರಸ್ತಾವನೆ:**

ಸಣ್ಣ ನೀರಾವರಿ ನೀರು ಬಳಕೆದಾರರ ಸ.ಸಂ.ನಿ., ತುಂಬಾಡಿ ಕೊರಟಗೆರೆ ತಾಲ್ಲೂಕು, ಇದು ಯಾವ ಉದ್ದೇಶಕ್ಕೆ ನೊಂದಣಿಯಾಗಿತ್ತೋ ಅದರಂತೆ ಕಾರ್ಯಚಟುವಟಿಕೆ ನಡೆಸದ ಪ್ರಯುಕ್ತ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಮಧುಗಿರಿ ಉಪವಿಭಾಗ ಮಧುಗಿರಿ ಇವರು ಸಂಘವನ್ನು ನಡೆಸಲು ಆಡಳಿತ ಮಂಡಳಿ ಆಸಕ್ತಿ ಇರುವುದಿಲ್ಲ. ಸಮಾಪನೆಗೊಳಿಸುವಂತೆ ಕೋರಿ ಉಲ್ಲೇಖ (1)ರಲ್ಲಿ ಪ್ರಸ್ತಾವೆ ಸಲ್ಲಿಸಲು ಆದೇಶಿಸಲಾಗಿತ್ತು.

ಉಲ್ಲೇಖ (2) ರೀತ್ಯಾ ಸಂಘವನ್ನು ಸಮಾಪನೆಗೊಳಿಸಿ ಸಮಾಪನಾಧಿಕಾರಿಯನ್ನಾಗಿ ಸಹಕಾರ ಸಂಘಗಳ ನಿರೀಕ್ಷಕರು, ಕೊರಟಗೆರೆ ಇವರನ್ನು ನೇಮಿಸಿ ನೋಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸಲು ಆದೇಶಿಸಲಾಗಿತ್ತು.

ಉಲ್ಲೇಖ (3) ರಲ್ಲಿ ಋಣಸಮಾಪನಾಧಿಕಾರಿಗಳು ನೋಂದಣಿ ರದ್ದತಿಗೆ ಪ್ರಸ್ತಾವೆ ಸಲ್ಲಿಸಿರುತ್ತಾರೆ. ಪ್ರಸ್ತಾವೆಯನ್ನು ಪರಿಶೀಲಿಸಿದೆ. ಸಮಾಪನಾಧಿಕಾರಿಗಳು ಆಸ್ತಿ ಜವಾಬ್ದಾರಿ ವಿಲೇವಾರಿ ಮಾಡಿ ಶೂನ್ಯಗೊಳಿಸಿರುತ್ತಾರೆ. ಪ್ರಯುಕ್ತ ಈ ಕೆಳಕಂಡ ಆದೇಶ.

**ಆದೇಶ**

**ನಂ: ಡಿಆರ್‌ಟಿ:ಎಲ್‌ಕ್ಯೂಡಿ:ಸಿಆರ್04/2010–11, ದಿನಾಂಕ: 31–03–2011**

ಪ್ರಸ್ತಾವೆಯಲ್ಲಿ ವಿವರಿಸಿರುವಂತೆ ಶ್ರೀ. ಆರ್. ಲೋಕೇಶ್, ಸಹಕಾರ ಸಂಘಗಳ ಉಪ–ನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯೂ :69: ಸಿಎಲ್‌ಎಂ:2001 ದಿನಾಂಕ: 21–11–2001ರಲ್ಲಿ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ ನಿ., ತುಂಬಾಡಿ ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ ಇದರ ನೋಂದಣಿ ಸಂ.ಸನಿ–33/ಆರ್‌ಎಸ್‌ಆರ್/ಜೆಒಕ್ಯೂ/26487/2000–2001 ದಿನಾಂಕ:29–09–2000ನ್ನು ರದ್ದುಪಡಿಸಿರುತ್ತೇನೆ. ಈ ಸಂಘವು ತಕ್ಷಣದಿಂದ ವಿಸರ್ಜನೆಗೊಂಡಿರುತ್ತದೆ ಮತ್ತು ಅಸ್ತಿತ್ವದಲ್ಲಿರುವುದಿಲ್ಲ.

ಈ ಆದೇಶವನ್ನು ನನ್ನ ಸ್ವಸಹಿ ಮತ್ತು ಕಛೇರಿ ಮುದ್ರೆಯೊಂದಿಗೆ ದಿನಾಂಕ:31–3–2011 ರಂದು ನೀಡಿದೆ.

ಸಹಕಾರ ಸಂಘಗಳ ಉಪ ನಿಬಂಧಕರು,
ತುಮಕೂರು ಜಿಲ್ಲೆ, ತುಮಕೂರು.

**ಪಿ.ಆರ್. 526**

**ಸಹಕಾರ ಸಂಘಗಳ ಉಪ ನಿಬಂಧಕರವರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಕೆಗಳು**

**ವಿಷಯ:** ಸಮಾಪನೆಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಕುರಡಿ, ದಾವಣಗೆರೆ– ತಾ. ಇದರ ನೋಂದಣಿಯನ್ನು ರದ್ದು ಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–28/2008–09 ದಿನಾಂಕ: 16–12–2008 ಮತ್ತು ದಿನಾಂಕ: 13–08–2010.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ಪತ್ರ ಸಂ:ಸನಿ31/ಸಮಾಪನೆ/ಹಾಉಸಸಂನಿಕುರಡಿ/ಸಿಆರ್–45/2008–09 ದಿನಾಂಕ: 25–04–2011.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ: ಎಆರ್–31/ಆರ್‌ಜಿಎನ್/24420/1997/98 ದಿನಾಂಕ 26–12–1997 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ ದಾವಣಗೆರೆ ಇವರು ದಿನಾಂಕ 16–12–2008 ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, 2ನೇ ವೃತ್ತ, ದಾವಣಗೆರೆ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ನಂತರ ದಿನಾಂಕ: 13–08–2010 ರಂದು ಸಮಾಪನಾಧಿಕಾರಿಗಳನ್ನು ಬದಲಾಯಿಸಿ, ಶ್ರೀ.ಟಿ. ಚನ್ನಬಸಪ್ಪ, ಸ.ಸಂ.ಗಳ ಹಿರಿಯ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಹರಪನಹಳ್ಳಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ನಂ: ಡಿಆರ್:ಡಿವಿಜಿ:/ನೋಸಂರ/ಸಿಆರ್–28/2008–09, ದಿನಾಂಕ: 29–04–2011**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯೂ :69: ಸಿಎಲ್‌ಎಂ:2001 ದಿನಾಂಕ: 21–11–2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ ಸಂಘಗಳ ಉಪ ನಿಬಂಧಕರು, ಬಿ. ಕುಬೇರಪ್ಪ ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಕುರಡಿ, ದಾವಣಗೆರೆ–ತಾ. ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ. ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಚೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವ ಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ಈ ದಿನ ದಿನಾಂಕ: 29–04–2011 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,

ಪಿ.ಆರ್. 527 ದಾವಣಗೆರೆ ಜಿಲ್ಲೆ, ದಾವಣಗೆರೆ.

**ಸಹಕಾರ ಸಂಘಗಳ ಉಪನಿಬಂಧಕರವರು ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಕಛೇರಿಯ ನಡವಳಿಗಳು**

**ವಿಷಯ:** ಸಮಾಪನೆಗೊಂಡಿರುವ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಯಲ್ಲಮ್ಮನಗರ, ದಾವಣಗೆರೆ– ತಾ. ಇದರ ನೋಂದಣಿಯನ್ನು ರದ್ದು ಪಡಿಸುವ ಕುರಿತು.

**ಉಲ್ಲೇಖ:** 1) ಈ ಕಛೇರಿ ಆದೇಶ ಸಂಖ್ಯೆ: ಡಿಆರ್/ಡಿವಿಜಿ/ಎಲ್‌ಕ್ಯೂಡಿ/ಸಿಆರ್–56/2005–06 ದಿನಾಂಕ: 27–02–2008 ಮತ್ತು ದಿನಾಂಕ: 13–08–2010.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪವಿಭಾಗ, ದಾವಣಗೆರೆ ಇವರ ಪತ್ರ ಸಂ:ಸನಿ31/ಸಮಾಪನೆ/ಹಾಉಸಸಂನಿಯಲ್ಲಮ್ಮನಗರ/ಸಿಆರ್–13/2007–08 ದಿನಾಂಕ: 25–04–2011.

**ಪ್ರಸ್ತಾವನೆ:**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ: ಎಆರ್–31/ಆರ್‌ಜಿಎನ್/26190/1999/2000 ದಿನಾಂಕ 22–09–1999 ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ, ಉಲ್ಲೇಖ (1)ರಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರು ದಿನಾಂಕ: 27–02–2008 ರ ಆದೇಶದಲ್ಲಿ ಸಮಾಪನೆಗೊಳಿಸಿ ಸಹಕಾರ ಸಂಘಗಳ ನಿರೀಕ್ಷಕರು, 2ನೇ ವೃತ್ತ, ದಾವಣಗೆರೆ, ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ನಂತರ ದಿನಾಂಕ: 13–08–2010 ರಂದು ಸಮಾಪನಾಧಿಕಾರಿಗಳನ್ನು ಬದಲಾಯಿಸಿ, ಶ್ರೀ.ಟಿ. ಚನ್ನಬಸಪ್ಪ, ಸ.ಸಂ.ಗಳ ಹಿರಿಯ ನಿರೀಕ್ಷಕರು, ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಹರಪನಹಳ್ಳಿ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ**

**ನಂ: ಡಿಆರ್:ಡಿವಿಜಿ:/ನೋಸಂರ/ಸಿಆರ್–13/2007–08, ದಿನಾಂಕ: 29–4–2011**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂ: ಸಿಎಂಡಬ್ಲ್ಯೂ :69: ಸಿಎಲ್‌ಎಂ:2001 ದಿನಾಂಕ: 21–11–2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ದಾವಣಗೆರೆ ಜಿಲ್ಲಾ ಸಹಕಾರ

ಸಂಘಗಳ ಉಪ ನಿಬಂಧಕರು, ಬಿ. ಕುಬೇರಪ್ಪ, ಕೆ.ಸಿ.ಎಸ್. ಆದ ನಾನು ಸಮಾಪನೆಗೊಂಡ ಹಾಲು ಉತ್ಪಾದಕರ ಸಹಕಾರ ಸಂಘ ನಿ, ಯಲ್ಲಮ್ಮನಗರ, ದಾವಣಗೆರೆ–ತಾ. ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ. ಈ ರದ್ಧತಿಯ ಆದೇಶದ ದಿನಾಂಕದಿಂದ ಸದರಿ ಸಹಕಾರ ಸಂಘದ ಕಾರ್ಯ ಚಟುವಟಿಕೆಗಳು ನಿಂತು ಹೋಗಿರುತ್ತವೆಂದು ಭಾವಿಸಲ್ಪಡತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಕಚೇರಿಯಲ್ಲಿಡಲು ಆದೇಶಿಸಿದೆ.

ನನ್ನ ಸ್ವಸಹಿ ಮತ್ತು ಕಛೇರಿಯ ಮುದ್ರೆಯೊಂದಿಗೆ ಈ ದಿನ ದಿನಾಂಕ: 29–04–2011 ರಂದು ಈ ಆದೇಶವನ್ನು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,

**ಪಿ.ಆರ್. 528** ದಾವಣಗೆರೆ ಜಿಲ್ಲೆ, ದಾವಣಗೆರೆ.

## ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ), ಕೇಂದ್ರ ಕಛೇರಿ, ಬೆಂಗಳೂರು ಇವರ ನಡವಳಿಗಳು

**ವಿಷಯ:** ಸ್ಥಗಿತಗೊಂಡ ರೈತರ ಸಹಕಾರಿ ಎಣ್ಣೆ ಗಿರಣಿ ನಿ. ಬಾಗಲಕೋಟೆ ತಾಲ್ಲೂಕು, ಬಾಗಲಕೋಟೆ, ಇದರ ಸಮಾಪನೆಯ ಬಗ್ಗೆ.

**ಉಲ್ಲೇಖ:** ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಳಗಾಂ ಇವರ ಪತ್ರ ಸಂ.ಜೆಆರ್‌ಎಲ್/ಡಿ1/ಸಮಾಪನೆ/12/05–06 ದಿನಾಂಕ: 10–01–2006.

**ಪ್ರಸ್ತಾವನೆ:**

ರೈತರ ಸಹಕಾರಿ ಎಣ್ಣೆ ಗಿರಣಿ ನಿ. ಬಾಗಲಕೋಟೆ ತಾಲ್ಲೂಕು, ಬಾಗಲಕೋಟೆ, ಗಿರಣಿಯು ಸಂ.ಜೆಆರ್‌ಎಲ್/9080/ಎಒಬಿ/9192/05–06 ದಿನಾಂಕ: 18–06–1991 ರಂದು ನೋಂದಣಿಯಾಗಿರುತ್ತದೆ. ಇದರ ಕಾರ್ಯವ್ಯಾಪ್ತಿಯು ಬಾಗಲಕೋಟೆ ಜಿಲ್ಲೆಯದಾಗಿರುತ್ತದೆ.

ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಳಗಾಂ ಇವರ ವರದಿಯಂತೆ ಗಿರಣಿಯು ತನ್ನ ಕಾರ್ಯಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಹೋಗುವಲ್ಲಿ ವಿಫಲವಾದ ಹಿನ್ನೆಲೆಯಲ್ಲಿ ಸಂಘವನ್ನು ಪುನರುಜ್ಜೀವನಗೊಳಿಸಿಕೊಂಡು ಮುನ್ನಡೆಸಿಕೊಂಡು ಹೋಗುವ ಬಗ್ಗೆ ಗಿರಣಿಯ ಆಡಳಿತ ಮಂಡಳಿಯ ಸದಸ್ಯರಿಗೆ ಈ ಕಛೇರಿಯಿಂದ ದಿನಾಂಕ: 20–3–06 ರಂದು ನೋಟೀಸ್ ಜಾರಿ ಮಾಡಲಾಗಿತ್ತು. ಸಮಾಪನೆಗೊಳಿಸುವುದರ ವಿರುದ್ಧ ಆಕ್ಷೇಪಣೆಗಳಿದ್ದಲ್ಲಿ ಸಲ್ಲಿಸುವಂತೆ ನೋಟೀಸಿನಲ್ಲಿ ಸೂಚಿಸಿದ್ದು, ನಿಗದಿತ ಅವಧಿಯೊಳಗೆ ಯಾವುದೇ ಆಕ್ಷೇಪಣೆಗಳು ಬಾರದ ಕಾರಣ, ಗಿರಣಿಯ ಸದಸ್ಯರಿಗೆ ಯಾವುದೇ ಪ್ರಯೋಜನವು ಗಿರಣಿಯಿಂದ ಇರುವುದಿಲ್ಲವೆಂದು ಕಂಡುಬಂದಿರುತ್ತದೆ ಹಾಗೂ ಉಲ್ಲೇಖ(1)ರಲ್ಲಿ ಸಹಕಾರ ಸಂಘಗಳ ಜಂಟಿ ನಿಬಂಧಕರು, ಬೆಳಗಾಂ ಪ್ರಾಂತ, ಬೆಳಗಾಂ ಇವರು ಸದರಿ ಗಿರಣಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72ರ ಪ್ರಕಾರ ಸಮಾಪನೆಗೊಳಿಸಲು ಶಿಫಾರಸ್ಸು ಮಾಡಿ ಪ್ರಸ್ತಾವೆ ಸಲ್ಲಿಸಿರುತ್ತಾರೆ. ಸದರಿ ಸಂಘವನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2)ರಂತೆ ಸಮಾಪನೆಗೊಳಿಸುವುದು ಸೂಕ್ತವೆಂದು ಮನಗಂಡು ಈ ಕೆಳಗಿನ ಆದೇಶ ಹೊರಡಿಸಿದೆ.

**ಆದೇಶ**

**ನಂ: ಆರ್‌ಸಿಎಸ್/ಎಲ್‌ಕ್ಯೂಡಿ/134/2005–06, ದಿನಾಂಕ: 12–05–2011**

ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೆ.ಹೆಚ್.ತಿಮ್ಮಯ್ಯ, ಸಹಕಾರ ಸಂಘಗಳ ಅಪರ ನಿಬಂಧಕರು (ಬಳಕೆ ಮತ್ತು ಮಾರಾಟ)ಆದ ನಾನು ಸರ್ಕಾರ ಅಧಿಸೂಚನೆ ಸಂ: ಸಿಓ/139/ಸಿಎಲ್‌ಎಂ/ 2010 ದಿನಾಂಕ: 17–2–2011 ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 72(2) ರನ್ವಯ ದತ್ತವಾಗಿರುವ ಅಧಿಕಾರದನ್ವಯ ರೈತರ ಸಹಕಾರಿ ಎಣ್ಣೆ ಗಿರಣಿ ನಿ. ಬಾಗಲಕೋಟೆ, ಈ ಗಿರಣಿಯನ್ನು ಸಮಾಪನೆಗೊಳಿಸಿ ಆದೇಶ ಹೊರಡಿಸಿರುತ್ತೇನೆ.

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 73(1)ರನ್ವಯ ಸಹಕಾರ ಸಂಘಗಳ ನಿರೀಕ್ಷಕರು (ಸಾಮಾನ್ಯ) ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಬಾಗಲಕೋಟೆ, ಇವರನ್ನು ಸಮಾಪಕರನ್ನಾಗಿ ನೇಮಕ ಮಾಡಿರುತ್ತೇನೆ.

ಸಮಾಪಕರು ಸಂಘದ ಪ್ರಭಾರವನ್ನು 15 ದಿನಗಳೊಳಗಾಗಿ ಪಡೆದುಕೊಂಡು ಪ್ರಭಾರ ಪಟ್ಟಿಯನ್ನು ಸಲ್ಲಿಸತಕ್ಕದ್ದು. ಅಲ್ಲದೆ ಗಿರಣಿಯ ಅಢಾವೆ ಪತ್ರದ ಆಧಾರದ ಮೇಲೆ ಆದ್ಯತಾ ಪಟ್ಟಿ ತಯಾರಿಸಿ ಈ ಕಛೇರಿಯಿಂದ ಅನುಮತಿ ಪಡೆದು ಆಸ್ತಿ ವಸೂಲಾತಿಯ ಆಧ್ಯತೆಯ ಮೇಲೆ ಜವಾಬ್ದಾರಿ ತೀರುವಳಿ ಮಾಡಿ ಸಂಘದ ನೋಂದಣಿ ರದ್ಧತಿಯ ಪ್ರಸ್ತಾವೆಗೆ ಜರೂರು ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ನನ್ನ ಹಸ್ತಾಕ್ಷರ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ:12–05–2011 ರಂದು ಹೊರಡಿಸಲಾಗಿದೆ.

**ಕೆ.ಹೆಚ್.ತಿಮ್ಮಯ್ಯ**

ಸಹಕಾರ ಸಂಘಗಳ ಅಪರ ನಿಬಂಧಕರು,

**ಪಿ.ಆರ್. 558** (ಬಳಕೆ ಮತ್ತು ಮಾರಾಟ)

## ನಿರ್ದೇಶಕರ ಕಛೇರಿ, ತಾಂತ್ರಿಕ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು

**ಅಧಿಸೂಚನೆ ಸಂಖ್ಯೆ : ಡಿಟಿಇ 42 ಇಎಸ್‌ಟಿ (10) 2010(2) ಬೆಂಗಳೂರು, ದಿನಾಂಕ: 21–5–2011.**

ಕರ್ನಾಟಕ ಲೋಕಸೇವಾ ಆಯೋಗದ ಅಧಿಸೂಚನೆ ಸಂಖ್ಯೆ: ಪಿಎಸ್‌ಸಿ 1 ಆರ್‌ಟಿಬಿ2/2008, ದಿನಾಂಕ: 26–2–2009 ರನ್ವಯ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಲ್ಲಿನ ಮೆಕ್ಯಾನಿಕಲ್ ಇಂಜಿನಿಯರಿಂಗ್ ಉಪನ್ಯಾಸಕರ ಹುದ್ದೆಗಳಿಗೆ ಆಯ್ಕೆಗೊಂಡ ಶ್ರೀಯುತ ಗೋವಿಂದರಾಜು. ಎಲ್ ಇವರನ್ನು ಈ ಕಛೇರಿ ಅಧಿಸೂಚನೆ ಸಂಖ್ಯೆ : ಡಿಟಿಇ 42 ಇಎಸ್‌ಟಿ(10) 2010, ದಿನಾಂಕ 4–3–2011 ರನ್ವಯ ಎಐಸಿಟಿಇ ವೇತನ ಶ್ರೇಣಿ ₹. 8000–13500 ರಲ್ಲಿ ನೇಮಕಾತಿ ಮಾಡಿ ದಿನಾಂಕ : 04–03–2011 ರಂದು ನಡೆದ ಕೌನ್ಸಿಲಿಂಗ್ ಕಾರ್ಯಕ್ರಮಕ್ಕೆ ಗೈರುಹಾಜರಾಗಿದ್ದ ಪ್ರಯುಕ್ತ ಅವರನ್ನು

